KA / BG-GPO / 2515 / WPP-47 / 2009-2011

# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೫ | ಬೆಂಗಳೂರು, ಗುರುವಾರ, ಮಾರ್ಚ್ ೧೮, ೨೦೧೦ (ಫಾಲ್ಗುಣ ೨೭, ಶಕ ವರ್ಷ ೧೯೩೧) | ಸಂಚಿಕೆ ೧೧ |
|---|---|---|

## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ**

**ವಿಷಯ :** 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಅದೇಶ ಸಂಖ್ಯೆ: ಮಾತಂಇ 30 ಆಡವಿ2009 ದಿನಾಂಕ: 12–05–09.
2. ಸರ್ಕಾರಿ ಆದೇಶಗಳ ಸಂಖ್ಯೆ: ಮಾತಂಇ 41 ಆಡವಿ2009 ದಿನಾಂಕ: 6–6–09, 14–7–09, 24–9–09, ಮತ್ತು 16–10–09.
3. ನಿರ್ದೇಶಕರು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರರವರ ಪತ್ರಗಳ ಸಂ:
   [1] ಕರಾದೂಸಂಅಕೇಂ/151/ಜಿಇಎನ್/2009,ದಿನಾಂಕ:16–11–2009,
   [2] ಕರಾದೂಸಂಅಕೇಂ/13/ಎಲ್ಆರ್ಐಎಸ್–ಬಿಡಿ/2009, ದಿನಾಂಕ: 5–12–2009,
   [3] ಕರಾದೂಸಂಅಕೇಂ/74/ಜಿಇಎನ್/2008, ದಿನಾಂಕ 16–12–2009.
   [4] ಕರಾದೂಸಂಅಕೇಂ/ 151/ಜಿಇಎನ್/2009, ದಿನಾಂಕ: 17–12–2009

**ಪ್ರಸ್ತಾವನೆ:**

2009–10ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ರಡಿಯಲ್ಲಿ ರೂ.680.00 ಲಕ್ಷಗಳ ಅನುದಾನವನ್ನು ಒದಗಿಸಲಾಗಿದೆ. ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಸದರಿ ರೂ.680 ಲಕ್ಷಗಳ ಒದಗಣೆ ಮೊತ್ತದಲ್ಲಿ ಸದರಿ ಸಂಸ್ಥೆಯ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 150.00 ಲಕ್ಷಗಳನ್ನು, ಸೆಮಿನಾರ್ ಮತ್ತು ಕಾನ್ಫರನ್ಸ್‌ಗಾಗಿ ರೂ. 15 ಲಕ್ಷಗಳನ್ನು ಎಂಟೆಕ್ ಕೋರ್ಸ್ ಸೌಲಭ್ಯಕ್ಕಾಗಿ ರೂ. 20.00 ಲಕ್ಷಗಳನ್ನು, ಎಲ್.ಆರ್.ಐಎಸ್ ಕಾರ್ಯಕ್ರಮಕ್ಕಾಗಿ ರೂ. 150.00 ಲಕ್ಷಗಳನ್ನು ಹಾಗೂ ಜಿ.ಐ.ಎಸ್ ಯೋಜನೆಗಾಗಿ ರೂ. 45.00 ಲಕ್ಷಗಳನ್ನು ಹಂಚಿಕೆ ಮಾಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಕೇಂದ್ರದ ಆಡಳಿತಾತ್ಮಕ ವೆಚ್ಚಕ್ಕಾಗಿ ರೂ. 112.50 ಲಕ್ಷಗಳನ್ನು, ಸೆಮಿನಾರ್ ಮತ್ತು ಕಾನ್ಫರನ್ಸ್‌ಗಾಗಿ ರೂ. 15.00 ಲಕ್ಷಗಳನ್ನು, ಜಿ.ಐ.ಎಸ್ ಯೋಜನೆಗಾಗಿ ರೂ. 25.00 ಲಕ್ಷಗಳನ್ನು ಅಂದರೆ ಒಟ್ಟು ರೂ. 152.50 ಲಕ್ಷಗಳನ್ನು ಸದರಿ ಕೇಂದ್ರಕ್ಕೆ ಈಗಾಗಲೇ ಬಿಡುಗಡೆ ಮಾಡಲಾಗಿದೆ.

ಮೇಲೆ (3) ರಲ್ಲಿ ಓದಲಾದ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ನಿರ್ದೇಶಕರ ಪತ್ರದಲ್ಲಿ ಆಡಳಿತಾತ್ಮಕ ವೆಚ್ಚಕ್ಕಾಗಿ ಹಂಚಿಕೆ ಮಾಡಲಾಗಿರುವ ರೂ.150 ಲಕ್ಷಗಳಲ್ಲಿ ಅಂತಿಮ ಕಂತಿನ ಮೊತ್ತವಾದ ರೂ. 37.50 ಲಕ್ಷಗಳ ಅನುದಾನವನ್ನು, ಎಂಟೆಕ್ ಕೋರ್ಸ್ ಸೌಲಭ್ಯಕ್ಕಾಗಿ ಹಂಚಿಕೆ ಮಾಡಲಾದ ರೂ. 20 ಲಕ್ಷಗಳ ಅನುದಾನವನ್ನು, ಬಳ್ಳಾರಿ ಜಿಲ್ಲೆಗೆ

ಸಂಬಂಧಿಸಿದಂತೆ ಇಂಟಿಗ್ರೇಟೆಡ್ ರಿಸೋರ್ಸಸ್ ಡೆವಲಪಮೆಂಟ್ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಎಲ್.ಆರ್.ಐ.ಎಸ್. ಕಾರ್ಯಕ್ರಮಕ್ಕಾಗಿ ಹಂಚಿಕೆ ಮಾಡಿಕೊಂಡಿರುವ ರೂ. 150 ಲಕ್ಷಗಳ ಅನುದಾನವನ್ನು ಹಾಗೂ ಭೌಗೋಳಿಕ ಮಾಹಿತಿ ಪದ್ದತಿ ಯೋಜನೆಯ ಅನುಷ್ಠಾನಕ್ಕಾಗಿ ಹಂಚಿಕೆ ಮಾಡಲಾಗಿರುವ ರೂ. 45 ಲಕ್ಷಗಳ ಅನುದಾನದ ಪೈಕಿ ಉಳಿಕೆ ರೂ. 20.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡಲು ಕೋರಲಾಗಿದೆ.

ಸದರಿ ಪ್ರಸ್ತಾವನೆಗಳನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರವು ಕೋರಿರುವ ಅನುದಾನಗಳನ್ನು ಬಿಡುಗಡೆ ಮಾಡಲು ನಿರ್ಧರಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 41 ಎಡಿಎಂ 2009, ಬೆಂಗಳೂರು, ದಿನಾಂಕ 21–01–2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2009–10ನೇ ಸಾಲಿಗೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರಕ್ಕೆ ಒದಗಿಸಲಾದ ಅನುದಾನದಲ್ಲಿ ಆಡಳಿತಾತ್ಮಕ ವೆಚ್ಚಕ್ಕಾಗಿ ಅಂತಿಮ ಕಂತಿನ ರೂ.37.50 ಲಕ್ಷಗಳನ್ನು (ಮುವ್ವತ್ತೇಳು ಲಕ್ಷದ ಐವತ್ತು ಸಾವಿರ ರೂಪಾಯಿಗಳು ಮಾತ್ರ). ಎಂಟೆಕ್ ಕೋರ್ಸ್ ಸೌಲಭ್ಯಕ್ಕಾಗಿ ರೂ. 20.00 ಲಕ್ಷಗಳನ್ನು, (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ), ಎಲ್.ಆರ್.ಐ.ಎಸ್ ಕಾರ್ಯಕ್ರಮದ ಅನುಷ್ಠಾನಕ್ಕಾಗಿ ರೂ 150.00 ಲಕ್ಷಗಳನ್ನು (ನೂರೈವತ್ತು ಲಕ್ಷ ರೂಪಾಯಿಗಳು ಮಾತ್ರ) ಹಾಗೂ ಜಿ.ಐ.ಎಸ್ ಯೋಜನೆ ಅನಷ್ಠಾನಕ್ಕಾಗಿ ಉಳಿಕೆ ರೂ. 20.00 ಲಕ್ಷಗಳನ್ನು (ಇಪ್ಪತ್ತು ಲಕ್ಷ ರೂಪಾಯಿಗಳು ಮಾತ್ರ). ಹೀಗೆ ಒಟ್ಟಾರೆ ರೂ. 227.50 ಲಕ್ಷಗಳ [ರೂ. ಇನ್ನೂರ ಇಪ್ಪತ್ತೇಳು ಲಕ್ಷದ ಐವತ್ತು ಸಾವಿರಗಳು ಮಾತ್ರ] ಅನುದಾನವನ್ನು ಸದರಿ ಕೇಂದ್ರಕ್ಕೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು 2009–10ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "3451–00–090–2–08 ಕರ್ನಾಟಕ ರಾಜ್ಯ ದೂರ ಸಂವೇದಿಕ ತಂತ್ರಜ್ಞಾನ ಬಳಕೆ ಕೇಂದ್ರ–059 ಇತರೆ ಖರ್ಚು [ಯೋಜನೆ]" ಇದರ ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರ ಇವರು ಅನುದಾನದ ಬಳಕೆಯ ಬಗ್ಗೆ ಉಪಯೋಗಿತಾ ದೃಡೀಕರಣ ಪತ್ರವನ್ನು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ:ಆಇ 02 ವೆಚ್ಚ–2/2010, ದಿನಾಂಕ 13.01.2010ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.243

**(ಎಂ.ವಿ. ಕೃಷ್ಣಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ ಜೈವಿಕ ತಂತ್ರಜ್ಞಾನ ಹಾಗೂ
ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ. ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ 2.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/06/ನಿಡಿಮಲೆ/2007/2242 ದಿನಾಂಕ 1–9–2007/4–10–2007.

2. ದಿನಾಂಕ 13–2–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ನಿಡಿಯಮಲೆ ಗ್ರಾಮದ ಬಳಿ ನಿಡಿಯಮಲೆ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ: 13–2–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ:: ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ 2.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 388 ಎನ್‌ಸಿಇ 2007, ಬೆಂಗಳೂರು, ದಿನಾಂಕ: 21ನೇ ಜನವರಿ 2010**

ಮೆ:: ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ನಿಡಿಯಮಲೆ ಗ್ರಾಮದ ಬಳಿ ನಿಡಿಯಮಲೆ ನದಿಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Latitude: 12°28`00" Longitude: 75°25"30") ಈ ಕೆಳಗಿನ ನಿಬಂಧನೆಗೊಳ್ಳಪಟ್ಟು ಹಂಚಿಕೆ ಮಾಡಲಾಗಿದೆ:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನ: ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧವ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧವ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಷಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾರರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ..
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್ ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 261

**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ:: ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ 100.00 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ಇಡಿ/08/ಬಿಪಿಸಿಎಲ್/2009/930 ದಿನಾಂಕ 18/21-2-2009.
2. ದಿನಾಂಕ 23-10-2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ:: ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಒಟ್ಟು 100.00 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ:: ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ 100.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:-

**ಸರ್ಕಾರದ ಆದೇಶ ಸಂಖ್ಯೆ: ಇಎನ್ 89 ಎನ್‌ಸಿಇ 2009, ಬೆಂಗಳೂರು, ದಿನಾಂಕ: 21ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಮೆ:: ಬೊರುಕಾ ಪವರ್ ಕಾರ್ಪೋರೇಷನ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ವಿವಿಧ ಸ್ಥಳಗಳಲ್ಲಿ ಒಟ್ಟು 100.00 ಮೆಗಾವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ:-

| Sl. No. | Toposheet No. | Proposed Capacity in MW | Near by villages of the proposed area and distirct | Geographical area description of the project |
|---|---|---|---|---|
| 1. | 480/13<br>57C/1<br>57C/2 | 100 MW | Danaikapor, Javur, Gajjegondanahalli, Kanabagahatte, Shivani, Sadihalli, Narayanapura, Hebburu, Katiganeru, Tamatadahalli, Chikamalluru, Gaduganahalli, Mudukere. Asandi, Anataragatti Chikkamagalur district | The potential area spread across 3 toposheets 480/13, 57C/1 and 57C/2.<br>It is a ground level plain terrain, consisting of high raised plateau, railway track, water bodies, coconut plantation, power line etc. The area appears to have intense agriculture activities and it is having moderate elevation varying from 720 to 750mtrs.<br>The area is held in the following Geographical co-ordinates:<br>Latitude: 13°40`24''-13°48`47''N<br>Longitude:75°58`55''-76°7`10''E<br>Ridge peaks: 778,770,773, 766, 753, 737, 725, 754, 716, 720m Amsi |

1 ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.

2 ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3 ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗ ಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4 ಗಾಳಿ ಚಕ್ರದ ಹಬ್ ಹೈಟ್‌ನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಠಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| >200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| >300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| >500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| >750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 262

**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಕರ್ನಾಟಕ ಸರ್ಕಾರದ ಇಲಾಖೆಗಳು ಹಾಗೂ ಅದಕ್ಕೆ ಸೇರಿದ ಸ್ವಾಯತ್ತ ಸಂಸ್ಥೆಗಳಾದ ಉದ್ದಿಮೆಗಳು, ಸ್ಥಳೀಯ ಪ್ರಾಧಿಕಾರಗಳು, ಮಂಡಳಿ, ನಿಗಮ ಇತ್ಯಾದಿಗಳಲ್ಲದ ಇತರೆ ಸಂಸ್ಥೆಗಳಾದ ಕೇಂದ್ರ ಸರ್ಕಾರದ ಉದ್ದಿಮೆಗಳು ಹಾಗೂ ಕೇಂದ್ರ ಸರ್ಕಾರದ ಇಲಾಖೆ ಇತ್ಯಾದಿಗಳು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ18–ಎ ರಡಿ ಲಭ್ಯವಿರುವ ಇ–ಸಂಗ್ರಹಣಾ ವೇದಿಕೆಯನ್ನು ಉಪಯೋಗಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಕೇಂದ್ರ ಸರ್ಕಾರದ ಸಂಸ್ಥೆಯಾದ ಹಿಂದೂಸ್ಥಾನ ಏರೋನಾಟಿಕ್ಸ್ ಲಿಮಿಟೆಡ್, ಇಂಜಿನ್ ಡಿವಿಜನ್, ಬೆಂಗಳೂರು ಇದರ ದಿನಾಂಕ: 04–11–2009ರ ಪತ್ರ ಸಂಖ್ಯೆ: E/DGM(IMM)/E-Procurement/09.

**ಪ್ರಸ್ತಾವನೆ :**

1. ಕೇಂದ್ರ ಸರ್ಕಾರದ ಸಂಸ್ಥೆಯಾದ ಹಿಂದೂಸ್ಥಾನ ಏರೋನಾಟಿಕ್ಸ್ ಲಿಮಿಟೆಡ್, ಇಂಜಿನ್ ಡಿವಿಜನ್, ಬೆಂಗಳೂರು ಇದರ, ಮೇಲೆ ಓದಲಾದ ದಿನಾಂಕ: 04–11–2009ರ ಪತ್ರದನ್ವಯ, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎ ರಡಿ ಲಭ್ಯವಿರುವ ಇ–ಸಂಗ್ರಹಣಾ ವೇದಿಕೆಯನ್ನು ಅಳವಡಿಸಲು ತನ್ನ ಇಚ್ಛೆಯನ್ನು ವ್ಯಕ್ತಪಡಿಸಿದೆ.

2. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎ ರನ್ವಯ, ಇ–ಆಡಳಿತ ವೇದಿಕೆಯ ಮೂಲಕ ಸಂಗ್ರಹಣಾ ಸಂಸ್ಥೆಗಳು ಟೆಂಡರ್‌ಗಳನ್ನು ಕರೆದು ಸರಕುಗಳು ಮತ್ತು ಸೇವೆಗಳನ್ನು ಸಂಗ್ರಹಣಾ ಮಾಡಲು ಆಸ್ಪದವನ್ನು ಕಲ್ಪಿಸಲಾಗಿದೆ. ಅದನ್ನು ಈ ಕೆಳಗೆ ಉದ್ಧರಿಸಿದೆ:–

“18-A E-Procurement.-(1) There shall be a single unified e-procurement platform for all procurement entity which may be notified under sub-section(2).

(2) With effect from such date, as may be specified by the Government, by notification, a procurement entity in respect of a class of procurement, if any, as may be notified shall procure its procurements through the e-procurement platform.

(3) Not withstanding anything contained in this Act, the Government may make rules, for specifying a separate procedure to be followed by procurement entities notified under sub-section (2) for e-procurement through e-procurement platform; and for non-application of other procedure of procurement to e-procurement.''

ಸದರಿ ಅಧಿನಿಯಮದ ಕಲಂ 2(ಎಎ) ರನ್ವಯ **"ಸಂಗ್ರಹಣಾ ಸಂಸ್ಥೆ"** ("Procurement entity'') ಎಂಬುದನ್ನು ಈ ಕೆಳಕಂಡಂತೆ ವ್ಯಾಖ್ಯಾನಿಸಲಾಗಿದೆ.

"Procurement entity'' means any Government Department, a State Government Undertaking, Local Authority or board, Body or Corporation established by or under any law and owned or controlled by the Government, and any other body or authority owned or controlled by the Government and as may be specified by it.''

ಮುಂದುವರೆದು, ಸದರಿ ಅಧಿನಿಯಮದ ಕಲಂ 2(ಸಿ)ರನ್ವಯ **"**Government" means the State Government ಎಂದು ವ್ಯಾಖ್ಯಾನಿಸಲಾಗಿದೆ. ಈ ರೀತಿ ರಾಜ್ಯ ಸರ್ಕಾರದ ಇಲಾಖೆ, ರಾಜ್ಯ ಸರ್ಕಾರದ ಉದ್ಯಮ ಇತ್ಯಾದಿಗಳು ಸದರಿ ಅಧಿನಿಯಮದಡಿ ಸಂಗ್ರಹಣಾ ಸಂಸ್ಥೆಗಳಾಗುತ್ತವೆ. ಆದುದರಿಂದ ಆ ಅಧಿನಿಯಮ ನೇರವಾಗಿ, ಕರ್ನಾಟಕ ಸರ್ಕಾರದ ಇಲಾಖೆಗಳು ಹಾಗೂ ಅದಕ್ಕೆ ಸೇರಿದ ಉದ್ಯಮ, ಮಂಡಳಿ ಇತ್ಯಾದಿಗಳಲ್ಲದೇ ಇರುವ ಸಂಸ್ಥೆಗಳಾದ ಕೇಂದ್ರ ಸರ್ಕಾರದ ಉದ್ಯಮಗಳು ಹಾಗೂ ಕೇಂದ್ರ ಸರ್ಕಾರದ ಇಲಾಖೆ ಇತ್ಯಾದಿಗಳಿಗೆ ಅನ್ವಯಿಸುವುದಿಲ್ಲ. ಆದರೂ ಮೇಲಿನ ಕಂಡಿಕೆ–1ರಲ್ಲಿ ಉಲ್ಲೇಖಿಸಿದಂತೆ, ಕೇಂದ್ರ ಸರ್ಕಾರದ ಸಂಸ್ಥೆಯಾದ ಹಿಂದೂಸ್ಥಾನ್ ಎರೋನಾಟಿಕ್ಸ್ ಲಿಮಿಟೆಡ್, ಇಂಜಿನ್ ಡಿವಿಜನ್, ಬೆಂಗಳೂರು, ಮೇಲೆ ಓದಲಾದ, ಇದರ ದಿನಾಂಕ: 04–11–2009ರ ಪತ್ರದನ್ವಯ ಇ–ಸಂಗ್ರಹಣಾ ವೇದಿಕೆಯನ್ನು ಅಳವಡಿಸಲು ತನ್ನ ಇಚ್ಛೆಯನ್ನು ವ್ಯಕ್ತಪಡಿಸಿದೆ. ಕೇಂದ್ರ ಸರ್ಕಾರದ ಇಂತಹ ಇನ್ನೂ ಕೆಲವು ಸಂಸ್ಥೆಗಳು ಹಾಗೂ ಕೇಂದ್ರ ಸರ್ಕಾರದ ಇಲಾಖೆಗಳು ರಾಜ್ಯ ಸರ್ಕಾರದ ಇ–ಸಂಗ್ರಹಣಾ ವೇದಿಕೆಯನ್ನು ಅಳವಡಿಸಲು ಇಚ್ಛೆಯನ್ನು ವ್ಯಕ್ತಪಡಿಸಿರುತ್ತವೆ.

3. ಇ–ಸಂಗ್ರಹಣಾ ಯೋಜನೆಯನ್ನು ಕರ್ನಾಟಕ ಸರ್ಕಾರದ ಸಂಸ್ಥೆಯಾದ ಇ–ಆಡಳಿತ ಕೇಂದ್ರದ ವತಿಯಿಂದ ಸಾರ್ವಜನಿಕ ಖಾಸಗಿ ಸಹಭಾಗಿತ್ವದಲ್ಲಿ ನಡೆಸಲಾಗುತ್ತಿದೆ. ಈ ಯೋಜನೆಯಡಿಯಲ್ಲಿ ಇ–ಸಂಗ್ರಹಣಾ ವೇದಿಕೆಯಲ್ಲಿ ಟೆಂಡರ್‌ಗಳನ್ನು ಕರೆದ ಸಂದರ್ಭದಲ್ಲಿ, ಟೆಂಡರ್‌ಗಳನ್ನು ಸಲ್ಲಿಸುವವರಿಂದ ಶುಲ್ಕವನ್ನು (tender processing fee) ವಸೂಲಿ ಮಾಡಲು ಆಸ್ಪದ ಇದೆ. ಕರ್ನಾಟಕ ಸರ್ಕಾರದ ಇಲಾಖೆಗಳು ಹಾಗೂ ಅದಕ್ಕೆ ಸೇರಿದ ಉದ್ಯಮ, ಮಂಡಳಿ ಇತ್ತಾದಿಗಳಲ್ಲದೇ ಇರುವ ಇತರೆ ಸಂಸ್ಥೆಗಳಾದ ಕೇಂದ್ರ ಸರ್ಕಾರದ ಉದ್ಯಮಗಳು ಹಾಗೂ ಕೇಂದ್ರ ಸರ್ಕಾರದ ಇಲಾಖೆಗಳು ಇತ್ಯಾದಿಗಳು, ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ, 1999ರ ಕಲಂ 18–ಎ ರನ್ವಯ, ಇ–ಆಡಳಿತ ವೇದಿಕೆಯ ಮೂಲಕ ಸರಕುಗಳು ಮತ್ತು ಸೇವೆಗಳನ್ನು ಸಂಗ್ರಹಣಾ ಮಾಡುವ ಸಲುವಾಗಿ ಟೆಂಡರ್ ಗಳನ್ನು ಕರೆಯಲು ಆಸ್ಪದ ಕಲ್ಪಿಸಿದಲ್ಲಿ, ಸಂಬಂಧಿಸಿದವರು ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಟೆಂಡರ್‌ಗಳನ್ನು ಸಲ್ಲಿಸಲು ಸಾಧ್ಯವಾಗುತ್ತದೆ. ಇದರಿಂದಾಗಿ, ಕರ್ನಾಟಕ ಸರ್ಕಾರದ ಸಂಸ್ಥೆಯಾದ ಇ–ಆಡಳಿತ ಕೇಂದ್ರದ ಆದಾಯ ಹೆಚ್ಚಾಗುವ ಸಾಧ್ಯತೆಯಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 01 ಇಸಂಗ್ರ 2009, ಬೆಂಗಳೂರು, ದಿನಾಂಕ: 30ನೇ ಡಿಸೆಂಬರ್ 2009.**

4. ಮೇಲೆ ವಿವರಿಸಿದ ಹಿನ್ನೆಲೆಯಲ್ಲಿ, ಕರ್ನಾಟಕ ಸರ್ಕಾರದ ಇಲಾಖೆಗಳು ಹಾಗೂ ಅದಕ್ಕೆ ಸೇರಿದ ಉದ್ಯಮ, ಮಂಡಳಿ ಇತ್ಯಾದಿಗಳಲ್ಲದೇ ಇರುವ ಇತರೆ ಸಂಸ್ಥೆಗಳಾದ ಕೇಂದ್ರ ಸರ್ಕಾರದ ಉದ್ಯಮಗಳು ಹಾಗೂ ಕೇಂದ್ರ ಸರ್ಕಾರದ ಇಲಾಖೆಗಳು ಇತ್ಯಾದಿಗಳು, ಕರ್ನಾಟಕ ಸರ್ಕಾರದ ಇ–ಆಡಳಿತ ವೇದಿಕೆಯ ಮೂಲಕ ಸರಕುಗಳು ಮತ್ತು ಸೇವೆಗಳನ್ನು ಸಂಗ್ರಹಣಾ ಮಾಡಲು ಟೆಂಡರ್‌ಗಳನ್ನು ಕರೆಯಲು ಇಚ್ಚಿಸಿ, ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಇ–ಆಡಳಿತ ಕೇಂದ್ರ, ಬೆಂಗಳೂರು ಇವರಿಗೆ ಕೋರಿಕೆಯನ್ನು ಸಲ್ಲಿಸಿದಲ್ಲಿ, ಆ ವೇದಿಕೆಯನ್ನು ಉಪಯೋಗಿಸಿಕೊಳ್ಳಲು ಅವರು ಅನುಮತಿ ನೀಡುವ ಅಧಿಕಾರವನ್ನು ಹೊಂದಿರುತ್ತಾರೆಂದು ಈ ಮೂಲಕ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಆರ್. 263**

(ಜಿ.ಎಸ್. ಪ್ರಸನ್ನ ಕುಮಾರ್)

ಪೀಠಾಧಿಕಾರಿ–1, (ಇ–ಆಡಳಿತ)

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ.

## INFRASTRUCTURE DEVELOPMENT SECRETARIAT

**Sub :** Development of 3 world class Railway Stations at – Bangalore City, Baiyyappanahalli and at Mangalore – Constitution of Steering Committee for implementation.

**Ref :** 1) D.O. Letter No. W.361/CN/Surveys/BNC/WCS-Project dated 17-12-2009 of the CAO, (Construction) SWR, Bangalore.

2) D.O. Letter No. W.361/CN/Surveys/BNC/WCS-Project dated 05-01-2010 of the General Manager, South Wastern Railway, Hubli addressed to the Chief Secretary, GoK.

**Preamble:**

1.1 The Honorable Minister for Rilways, GoI, in her budget s peech 2009-10, announced sanction for development of two World Class Stations at Bangalore City and Baiyyappanahalli. The General Manager, South Western Railway, Hubli in his letter dated 05-01-2010 informed the Chief Secretary, GoK that their Construction Organization has already taken up the preliminary work of development and are in touch with infrastructure Development and Urban Development departments of Government of Karnataka.

1.2 Development of World Class Stations require detailed planning and approvals for traffic, land use, re-settlement and rehabilitation, inter-modal transports, and infrastructure developments involving clearances by statutory bodies.

1.3 Ministry of Railways has suggested setting up of a Steering Committee under the Chairmanship of Chief secretary with members from various departments of the Railways and GoK to resolve various issue that may arise from time to time.

1.4 The GoK, through its Infrastructure Deveopment Department, is also planning to develop Inter-modal Transit Hubs for seamless movement of traffic from different modes and to reduce traffic congestion in the city.

**1.5** The need for creation of a steering committee is felt for expeditious implementation of the projects by the Railways, and hence the order:

**Government Order No. IDD 67 NSW 2009, Bang**alore Dated 20th January 2010.

2.1 In the circumstances explained in the preamble, approval is accorded for setting up of a Steering Committee under the chairmanship of the Chief Secretary, GoK with the following members:-

1. Chief Secretary, Government of Karnataka – Chairman,
2. Principal Secretary, Urban Development Department – Member,
3. Principal Secretary, Infrastructure Development Department – Member,
4. Principal Secretary, Commerce and Industries Department – Member,
5. Secretary, Revenue Department – Member,
6. Commissioner of Police, Bangalore – Member,
7. Commissioner, BBMP – Member,
8. Commissioner, Bangalore Development Authority – Member,
9. Deputy Commissioner, D.K. Dist, Mangalore – Member,
10. Chief Administrative Officer/Construction, SWR, Bangalore,
11. Divisional Railway Manager, SWR, Bangalore.

2.2 The Chairman of the Steering Committee may co-opt/invite additional members as and when required.

By Order and in the name of the Governor of Karnataka

**(R. Shivalingaiah)**
Under Secretary to Government (PPP Cell)
Infrastucture Development Department.

P.R. 264

## WATER RESOURCES SECRETARIAT

**Sub :** According Administrative Approval to the Minor Irrigation Projects under Accelerated Irrigation Benefit Programme – Regarding.

**Read :** Letter No. CEMI(S)/TA-2/AE-5/2009/279, dated 27-01-2010 from the Chief Engineer, Minor Irrigation South Zone, Bangalore.

**Preamble:**

As per the modified guidelines issued by the Government of India, Minor Irrigation schemes with potential of more than 50 hectares which serve tribal areas and drought prone areas in the non-special category states are eligible for inclusion under Accelerated Irrigation Benefit Programme (AIBP) effective from December 2006. Karnataka State is classified as one of the non-special category States. 81 taluks in the State are approved under Drought prone Area Programme (DPAP). Minor Irrigation schemes with potential more than 50 hectares in these 81 taluks are eligible for inclusion under Accelerated Irrigation Benefit Programme (AIBP). Central Assistance will be in the form of Central Grant that will be 90% of the project cost. The balance cost of the project will have to be borne by the State as State's share.

Government of Karnataka has identified new Minor Irrigation Schemes in these taluks for seeking Government of India approval under AIBP. Finance Department. Government of Karnataka has also approved the proposal of the Water Resources Department (Minor Irrigation) for according approval to such schemes. The Chief Engineer, Minor Irrigation South Zone in the letter read above has requested for according administrative approval to the estimates of the works proposed under AIBP. Accordingly the following schemes in DPAP taluks are being considered for according administrative approval.

Head of Account: 4702-00-101-1-10-139 AIBP Major Works

Rs. In lakhs

| Sl. No. | Name of the Project | District | Taluk | Estimated cost | Potential planned in Ha. | Cost per Ha. |
|---|---|---|---|---|---|---|
| 1 | 2 | 3 | 4 | 5 | 6 | 7 |
| 1 | Construction of New Tank near Samathala Village. | Chikkamagalur | Tarikere | 100.00 | 80.00 | 1.25 |
| 2 | Construction of Pickup at Ittigehalla. | Chikkamagalur | Tarikere | 50.00 | 52.00 | 0.96 |
| 3 | Construction of Nagannanala Pickup | Chikkamagalur | Tarikere | 107.00 | 353.00 | 0.28 |
| 4 | Construction of Pickup & Channels to hosur bagehalla at Bandigadi Panchayat. | Chikkamagalur | Koppa | 40.00 | 52.00 | 0.769 |
| 5 | Constructionf of Canal to Vontuvalli in Marithotlu Panchayat. | Chikkamagalur | Koppa | 40.00 | 51.00 | 0.784 |
| 6 | Construction of Pickup & Channels to Begar Vadeyara Muttanahally. | Chikkamagalur | Shringeri | 50.00 | 20.00 | 0.98 |
| | | Total | | 387.00 | | |

**Government Order No. SANEEYEE 236 MASAVI 2009 Bangalore, Dated 27-01-2010**

In view of the above, Administrative approval is hereby accorded for taking up the above 6 works with an estimated cost totaling to Rs. 387.00 lakhs (Three hundred and eighty seven lakhs only) subject to the following conditions.

1. Implementation of these projects should be taken up only after receipt of necessary approval from the GOI.
2. The projects are to be completed with in a period of 2 years after receipt of approval of Government of India to these schemes.
3. The funding of the scheme is in the ratio of 90:10 between the Central Government and State Government.
4. The Central share is in the form of grant to the State.
5. The projects will be implemented by the Water Resources Department (Minor Irrigation) as per the KTPP act.
6. The implementation of the project shall adhere to the terms and conditions of the guidelines issued by the GOI.
7. The implementation of the project shall be as per the required technical specifications and financial specifications as per the approved DPRs.
8. Water users association shall be formed for post construction maintenance and the scheme shall be handed over to the same after its construction for the O&M.

This order is issued with the concurrence of Finance Department in note No. PWD-890-FC-1/2009 dated 09-12-2009.

By Order and in the name of the Governor of Karnataka

**(K.Sudhakara Shetty)**

Under Secretary to Government

Water Resources Department (Minor Irrigation)

P.R.265

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಹೆಚ್.ವಿ. ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, ಪೊಲೀಸ್ ಅಧೀಕ್ಷಕರ ಕಛೇರಿ, ಹಾವೇರಿ ಇವರನ್ನು ಸೇವೆಗೆ ಪುನರ್ ನಿಯುಕ್ತಿಗೊಳಿಸುವ ಬಗ್ಗೆ.

**ಓದಲಾಗಿದೆ :** 1.ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್. ಸಿ.ಶಾ 1:69:2009–10 ದಿನಾಂಕ: 05–06–2009.

2. ಸರ್ಕಾರದ ಆದೇಶ ಸಂಖ್ಯೆ: ಒಇ 292 ಪಿಪಿಇ 2009, ಬೆಂಗಳೂರು ದಿನಾಂಕ: 30–06–2009.
3. ಸರ್ಕಾರದ ಆದೇಶ ಸಂಖ್ಯೆ: ಒಇ 292 ಪಿಪಿಇ 2009, ಬೆಂಗಳೂರು ದಿನಾಂಕ: 12–10–2009.
4. ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿಪಿಎನ್.ಸಿ.ಶಾ 1/69/2009–10 ದಿನಾಂಕ: 17–12–2009.

**ಪ್ರಸ್ತಾವನೆ :–**

ಶ್ರೀ ಹೆಚ್.ವಿ. ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು, (ಅಮಾನತ್ತಿನಲ್ಲಿರುವವರು) ಇವರು ಜೆಎಂಎಫ್ ಸಿ ನ್ಯಾಯಾಲಯ, ಸವಣೂರು, ಇಲ್ಲಿ ಪ್ರಭಾರ ಸ.ಸ.ಅ. ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಶ್ರೀ ಕರಿಯಪ್ಪ ನೀಲಪ್ಪ ಮೆಡ್ಲೇರಿ ಇವರು ಸಿ.ಸಿ. ಸಂಖ್ಯೆ: 291/2008ರ ಸಂಬಂಧ ಅಭಿಯೋಗದ ಪರ ಸಾಕ್ಷಿಗಳಿಗೆ ಸೂಕ್ತ ತಿಳುವಳಿಕೆ ನೀಡಿ ಸಮರ್ಥವಾಗಿ ಕೇಸನ್ನು ನ್ಯಾಯಾಲಯದ ಮುಂದೆ ಮಂಡಿಸುವ ಬಗ್ಗೆ ದಿನಾಂಕ: 03–06–2009ರಂದು ರೂ. 1,000/–ಗಳ ಲಂಚದ ಹಣವನ್ನು ಸ್ವೀಕರಿಸುತ್ತಿದ್ದಾಗ ಲೋಕಾಯುಕ್ತ ಬಲೆಗೆ ಸಿಕ್ಕಿಬಿದ್ದಿದ್ದರೆಂಬ ಆಧಾರದ ಮೇಲೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ

ಓದಲಾದ (1)ರ ದಿನಾಂಕ: 05–06–2009ರ ಪತ್ರದಲ್ಲಿ ಸದರಿಯವರನ್ನು ಅಮಾನತ್ತಿನಲ್ಲಿಡುವಂತೆ ಶಿಫಾರಸ್ಸು ಮಾಡಲಾಗಿತ್ತು. ಆ ಪ್ರಕಾರ ಮೇಲೆ ಓದಲಾದ (2)ರ ಸರ್ಕಾರದ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 10(1)(ಎ) ರೀತ್ಯಾ ಸರ್ಕಾರಿ ಸೇವೆಯಿಂದ ಅಮಾನತ್ತಿನಲ್ಲಿ ಇರಿಸಲಾಗಿತ್ತು.

ಶ್ರೀ ಹೆಚ್.ವಿ. ಕಾಳಪ್ಪನವರ್ ಇವರ ವಿರುದ್ಧ ಕಲಂ 7, 13(1)(ಡಿ) ಸಹವಾಚ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಸಕ್ಷಮ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಕರ್ನಾಟಕ ಲೋಕಾಯುಕ್ತ ಪೊಲೀಸರಿಗೆ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಅನುಮತಿ ನೀಡಲಾಗಿರುತ್ತದೆ.

ಶ್ರೀ ಹೆಚ್.ವಿ. ಕಾಳಪ್ಪನವರ್ ಇವರು ತಮ್ಮ ಅಮಾನತ್ತನ್ನು ರದ್ದುಪಡಿಸಿ ಸೇವೆಗೆ ಪುನರ್ ನೇಮಕ ಮಾಡುವ ಬಗ್ಗೆ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಇವರು ಮೇಲೆ (4)ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿರುತ್ತಾರೆ.

ಈ ಪ್ರಕರಣದಲ್ಲಿ ತನಿಖೆಯು ಸಂಪೂರ್ಣವಾಗಿರುವುದರಿಂದ ಮತ್ತು ಸದರಿ ಅಧಿಕಾರಿಯವರನ್ನು ಕರ್ನಾಟಕ ಲೋಕಾಯುಕ್ತರು ಸಕ್ಷಮ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಅನುಮತಿ ನೀಡಿರುವ ಹಿನ್ನೆಲೆಯಲ್ಲಿ, ಶ್ರೀ ಹೆಚ್.ವಿ. ಕಾಳಪ್ಪನವರ್ ಅವರ ಅಮಾನತ್ತನ್ನು ರದ್ದುಪಡಿಸಿ, ಸೇವೆಗೆ ಪುನರ್ ನೇಮಿಸುವುದು ಸಮಂಜಸವಾಗಿ ಕಂಡುಬಂದಿರುವುದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಒಇ 292 ಪಿಪಿಇ 2009, ಬೆಂಗಳೂರು, ದಿನಾಂಕ: 25ನೇ ಜನವರಿ 2010**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಶೀಲಿಸಿ, ಶ್ರೀ ಹೆಚ್.ವಿ. ಕಾಳಪ್ಪನವರ್, ಸಹಾಯಕ ಅಭಿಯೋಗ ನಿರ್ದೇಶಕರು (ಪ್ರಸ್ತುತ ಅಮಾನತ್ತಿನಲ್ಲಿರುವವರು), ಪೊಲೀಸ್ ಅಧೀಕ್ಷಕರ ಕಛೇರಿ, ಹಾವೇರಿ ಇವರ ವಿರುದ್ಧ ಮೊಕದ್ದಮೆ/ಇಲಾಖಾ ವಿಚಾರಣೆ ಬಾಕಿ ಇರಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಅಪೀಲು) ನಿಯಮಗಳ 10ನೇ ನಿಯಮದ 5ನೇ ಉಪ ನಿಯಮ (ಸಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಇವರ ಅಮಾನತ್ತನ್ನು ರದ್ದುಪಡಿಸಿ, ಸಹಾಯಕ ಅಭಿಯೋಗ ನಿರ್ದೇಶಕರು, ಅಭಿಯೋಗ ಉಪನಿರ್ದೇಶಕರ ಕಛೇರಿ, ಮಂಗಳೂರು ಇಲ್ಲಿ ಖಾಲಿ ಇರುವ ಹುದ್ದೆಗೆ ಪುನರ್ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
ಪಿ.ಆರ್. 266
**(ಕೆ.ಸಿ. ಸಿದ್ದಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ
(ಕಾನೂನು ಮತ್ತು ಸುವ್ಯವಸ್ಥೆ, ಕಾಫಿ ಪೋಸಾ ಮತ್ತು ಅಭಿಯೋಗ)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ ಕರ್ನಾಟಕ ಸರ್ಕಾರದ ಸಚಿವಾಲಯ ಇವರು ಸರ್ಕಾರದ ದಂಡನಾ ಆದೇಶದ ವಿರುದ್ಧ ಘನತೆವೆತ್ತ ರಾಜ್ಯಪಾಲರಿಗೆ ಸಲ್ಲಿಸಲಾದ ಮೇಲ್ಮನವಿ ಬಗ್ಗೆ ಆದೇಶ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 14 ಎಸ್ಇಎನ್ 06 (ಸಿಆಸುಇ 130 ಕೆಇವಿ 07) ದಿನಾಂಕ: 29–12–2008.
2. ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ ಕ.ಸ.ಸ. ರವರ ಮೇಲ್ಮನವಿ ದಿನಾಂಕ: 26–03–2009.
3. ಕರ್ನಾಟಕ ರಾಜ್ಯಪಾಲರ ಸಚಿವಾಲಯ ರವರ ಪತ್ರ ಸಂಖ್ಯೆ: ಜಿಎಸ್ 10 ಆರ್ಎಸಿ 2009 ದಿನಾಂಕ: 08–04–2009.

**ಪ್ರಸ್ತಾವನೆ :**

ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ ಕರ್ನಾಟಕ ಸರ್ಕಾರದ ಸಚಿವಾಲಯ ಇವರು ತಹಸಿಲ್ದಾರ್, ಸಿಂಧನೂರು ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಡಿಸೆಂಬರ್ 2005 ರಲ್ಲಿ ಜರುಗಿದ ಜಿಲ್ಲಾ/ತಾಲ್ಲೂಕು ಪಂಚಾಯಿತಿ ಚುನಾವಣೆಯಲ್ಲಿ ರಾಯಚೂರು ಜಿಲ್ಲೆ ಸಿಂಧನೂರು ತಾಲ್ಲೂಕಿನ ರಾಗಲಪರ್ವಿ ಜಿಲ್ಲಾ ಪಂಚಾಯತ್ ಮತಕ್ಷೇತ್ರದ ಸಹಾಯಕ ಚುನಾವಣಾಧಿಕಾರಿ ಹುದ್ದೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ, ಮತ ಎಣಿಕೆ ವೇಳೆಯಲ್ಲಿ ಎಣಿಕೆ ಕೊಠಡಿಯ ಪೀಠಾಧಿಕಾರಿಯವರು ನೀಡಿದ ಅಭ್ಯರ್ಥಿವಾರು ಅಂಕಿ ಅಂಶಗಳನ್ನು ಕ್ರೋಡಿಕರಿಸಿ ಚುನಾವಣಾಧಿಕಾರಿಗಳಿಗೆ ವರದಿಯನ್ನು ನೀಡುವಾಗ 2805 ರ ಬದಲಾಗಿ ಕೇವಲ 2273 ಮತಗಳ ವಿವರ ನೀಡಿ 532 ಮತಗಳ ವಿವರಗಳನ್ನು ಕೈಬಿಟ್ಟು, ಅದನ್ನು ಚುನಾವಣಾಧಿಕಾರಿಗಳಿಗೆ ಹಾಜರುಪಡಿಸುವ ಮುನ್ನ ಕೂಲಂಕಷವಾಗಿ ಪರಿಶೀಲಿಸದೇ ಪೀಠಾಧಿಕಾರಿಗಳು ಸಲ್ಲಿಸಿದ್ದ ತಪ್ಪು

ಮಾಹಿತಿಯನ್ನೊಳಗೊಂಡ ಅಂಕಿ ಅಂಶಗಳನ್ನೇ ಗಣನೆಗೆ ತೆಗೆದುಕೊಂಡು ಚುನಾವಣೆ ಫಲಿತಾಂಶಕ್ಕೆ ವ್ಯತ್ಯಯ ಉಂಟು ಮಾಡಿ ಸೋತ ಅಭ್ಯರ್ಥಿಯು ಆಯ್ಕೆಯಾಗಿರುವರೆಂದು ಚುನಾವಣಾಧಿಕಾರಿಯವರು ಚುನಾವಣಾ ಪತ್ರ ನೀಡಿ ನಂತರ ಅದನ್ನು ರದ್ದುಪಡಿಸಿ ಶ್ರೀಮತಿ ಗಂಗಮ್ಮ ಕಾಂಗ್ರೆಸ್ ಅಭ್ಯರ್ಥಿ ಅವರು ಆಯ್ಕೆಯಾಗಿರುವರೆಂದು ಚುನಾವಣಾ ಪತ್ರ ನೀಡಲು ಅದರಂತೆ ಫಲಿತಾಂಶ ಘೋಷಿಸುವಲ್ಲಿ ಚುನಾವಣಾಧಿಕಾರಿಗಳಿಗೆ ಸಹಕರಿಸುವಲ್ಲಿ ವಿಫಲರಾಗಿ ಕರ್ತವ್ಯ ನಿರ್ವಹಣೆಯಲ್ಲಿ ಲೋಪವೆಸಗುವ ಮೂಲಕ ಎಸಗಿದ ದುರ್ನಡತೆಯ ಆರೋಪದ ಸಂಬಂಧ ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಿ ಇವರ ಮೇಲೆ ಹೊರಿಸಲಾದ ಆರೋಪವು ಭಾಗಶಃ ಸಾಬೀತಾಗಿರುವ ಹಿನ್ನೆಲೆಯಲ್ಲಿ ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಆದೇಶದಲ್ಲಿ ಕೆ.ಸಿ.ಎಸ್.(ಸಿಸಿಎ) ನಿಯಮಾವಳಿ ನಿಯಮ 8(ii)ರಡಿಯಲ್ಲಿ ವಾಗ್ದಂಡನೆ ವಿಧಿಸಲಾಗಿತ್ತು.

ಮೇಲ್ಕಂಡ ದಂಡನಾ ಆದೇಶದ ವಿರುದ್ಧ ಆರೋಪಿತರು ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957ರ ನಿಯಮ 18(2)(ಬಿ) ರನ್ವಯ ಗೌರವಾನ್ವಿತ ರಾಜ್ಯಪಾಲರಿಗೆ ಮೇಲ್ಮನವಿ ಸಲ್ಲಿಸಿ ತಮ್ಮನ್ನು ದೋಷಮುಕ್ತನೆಂದು ಘೋಷಿಸುವಂತೆ ಕೋರಿರುತ್ತಾರೆ. ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ ಕ.ಸ.ಸ. ಇವರು ಸಲ್ಲಿಸಿರುವ ಮೇಲ್ಮನವಿ ಮತ್ತು ತತ್ಸಂಬಂಧದ ಪರಿಶೀಲನಾ ಟಿಪ್ಪಣಿ ವಾಸ್ತವಾಂಶಗಳನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರವಾದ ಘನತೆವೆತ್ತ ರಾಜ್ಯಪಾಲರು ಈ ಕೆಳಕಂಡಂತೆ ಆದೇಶಿಸಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 14 ಎಸ್ಇಎನ್ 06, (ಸಿಆಸುಇ 130 ಕೆಇವಿ 2007),**

**ಬೆಂಗಳೂರು, ದಿನಾಂಕ: 23ನೇ ಜನವರಿ 2010**

ORDER

I have considered the appeal petition submitted under Rule 18 of KCS(CCA) Rules, 1957 by Sri K.P. Chandrahas, Section Officer, Karnataka Government Secretariat against the Government Order No. DPAR 14 SEN 2006 (DPAR 130 KEV 2007) dated 29th December 2008, imposing the penalty of CENSURE in the light of the contentions raised in the appeal petition and on perusal of the connected enquiry and appeal records.

While the appeliant was working as Tahasildar, Sindanoor Taluk: on depoutation from Karnataka Government Secretariat and as Asst. Retuming Officer of Zilla Panchayat elections of Raichur along with other officials, the election results were wrongly declared due to errors in tabulation of votes and non verification of the statistics.

The contentions of the appellant that he was attending to various other duties in connection with maintenance of law and order, that the supervision of counting and compilation of votes had been entrusted to some other officials, and further that the Desk Officer has himself owned up the responsibility for the arithmetical error in counting of votes, which has subsequently been rectified and revised and correct results were declared have been considered.

In the circumstances, after duly considering the entire matter, I allow the appeal petition and set-aside the order dated 29th December 2008 of the Disciplinary Authroity, so far as the appellant is concerned. The Disciplinary Authority may administer warning on the appellant, if so advised.

(H.R. Bhardwaj)
Governor of Karnataka

ಘನತೆವೆತ್ತ ರಾಜ್ಯಪಾಲರ ಮೇಲಿನ ಆದೇಶದನ್ವಯ, ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ, ಕ.ಸ.ಸ. ಸೇವಾ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನ ಗ್ರಾ.ಅ. ಮತ್ತು ಪಂಚಾಯತ್ ರಾಜ್ ಇಲಾಖೆ ರವರು ಇನ್ನು ಮುಂದೆ ಈ ರೀತಿಯ ಸನ್ನಿವೇಶಗಳಿಗೆ ಆಸ್ಪದ ನೀಡಕೂಡದೆಂದು ಈ ಮೂಲಕ ಎಚ್ಚರಿಕೆ ನೀಡಲಾಗಿದೆ. ಹಾಗೆಯೇ ಘನತೆವೆತ್ತ ರಾಜ್ಯಪಾಲರ ಮೇಲಿನ ಆದೇಶದಿಂದಾಗಿ ಶ್ರೀ ಕೆ.ಪಿ. ಚಂದ್ರಹಾಸ್, ಶಾಖಾಧಿಕಾರಿ ಕ.ಸ.ಸ. ರವರು ಆದೇಶ ಸಂಖ್ಯೆ: ಸಿಆಸುಇ 14 ಎಸ್ ಇಎನ್ 06 (ಸಿಆಸುಇ 130 ಕೆಇವಿ 07) ದಿನಾಂಕ: 29–12–2008 ಹೊರಡಿಸದಿದ್ದಲ್ಲಿ ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 267

**(ಎಚ್.ಆರ್. ನಾಗೇಂದ್ರ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಶ್ರೀ ಇಂದ್ರರಾಜ ಅರಸ್, ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಅವರು ಕೈಗೊಂಡ ಇಂಡೋನೇಷಿಯಾ ಪ್ರವಾಸಕ್ಕೆ ಘಟನೋತ್ತರ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ :** ಸರ್ಕಾರಿ ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಅವರ ಟಿಪ್ಪಣಿ ಸಂಖ್ಯೆ: ಸಿಐ 279 ಪಿಎಸ್ಐ 2009, ದಿನಾಂಕ: 10–12–2009.

**ಪ್ರಸ್ತಾವನೆ :**

ಪ್ರಧಾನ ಕಾರ್ಯದರ್ಶಿ, ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ, ಅವರು ಮೇಲೆ ಓದಲಾದ ದಿನಾಂಕ: 10–12–2009ರ ಟಿಪ್ಪಣಿಯಲ್ಲಿ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯ ಅಪರ ನಿರ್ದೇಶಕರಾದ ಶ್ರೀ ಇಂದ್ರರಾಜ ಅರಸ್ ಅವರು ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ನಿರ್ದೇಶನದ ಮೇರೆಗೆ ಇಂಡೋನೇಷಿಯಾದ ಜಕಾರ್ತಾದಲ್ಲಿ 2009ರ ಆಗಸ್ಟ್ 7 ರಿಂದ 10ರ ವರೆಗೆ ಜರುಗಿದ ಮೇಡ್ ಇನ್ ಇಂಡಿಯಾ ಪ್ರದರ್ಶನದಲ್ಲಿ ಭಾಗವಹಿಸಲು ವಿದೇಶ ಪ್ರವಾಸ ಕೈಗೊಂಡಿದ್ದು. ಅಧಿಕಾರಿಯು ಬೇಟಿಯ ನಂತರ ಸಲ್ಲಿಸಿದ ವರದಿಯನ್ನು ಪರಿಶೀಲಿಸಲಾಗಿ ಸದರಿ ಪ್ರವಾಸವು ಉಪಯುಕ್ತವಾಗಿರುವುದು ಕಂಡುಬಂದಿರುವುದರಿಂದ ಅದಕ್ಕೆ ಘಟನೋತ್ತರ ಮಂಜೂರಾತಿ ನೀಡುವಂತೆ ಶಿಫಾರಸ್ಸು ಮಾಡಿದ್ದಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 176 ಸೇಇಮು 2009, ಬೆಂಗಳೂರು, ದಿನಾಂಕ: 25ನೇ ಜನವರಿ 2010**

ಶ್ರೀ ಇಂದ್ರರಾಜ ಅರಸ್, ಅಪರ ನಿರ್ದೇಶಕರು, ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಅವರು ಇಂಡೋನೇಷಿಯಾದ ಜಕಾರ್ತಾದಲ್ಲಿ ದಿನಾಂಕ: 07–08–2009 ರಿಂದ 10–08–2009ರ ವರೆಗೆ ಜರುಗಿದ ಮೇಡ್ ಇನ್ ಇಂಡಿಯಾ ಪ್ರದರ್ಶನದಲ್ಲಿ ಪಾಲ್ಗೊಳ್ಳಲು ಕೈಗೊಂಡ ವಿದೇಶ ಪ್ರಯಾಣಕ್ಕೆ ಸರ್ಕಾರದ ಘಟನೋತ್ತರ ಮಂಜೂರಾತಿ ನೀಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಆರ್. 268**

**(ಎಂ.ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು–2)

## ಆರ್ಥಿಕ ಸಚಿವಾಲಯ

**ವಿಷಯ :** ನೂತನ ಜಿಲ್ಲೆ ಯಾದ್‌ಗೀರ್‌ನಲ್ಲಿ ಜಿಲ್ಲಾ ಖಜಾನೆಯನ್ನು ಸ್ಥಾಪಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರಿ ಅಧಿಸೂಚನೆ ಸಂಖ್ಯೆ: ಕಂಇ 59 ಭೂದಾಮ 2008, ದಿನಾಂಕ: 15–09–2009
2. ಖಜಾನೆ ನಿರ್ದೇಶಕರ ಪತ್ರ ಸಂಖ್ಯೆ: ಖನಿ/ಪ್ರಕ್ರಿಯೆ/36/2009–10, ದಿನಾಂಕ: 28–10– 2009

**ಪ್ರಸ್ತಾವನೆ :–**

ನಿರ್ದೇಶಕರು, ಖಜಾನೆ ಇಲಾಖೆ, ಬೆಂಗಳೂರು ಇವರು ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರವು ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಗುಲ್ಬರ್ಗಾ ಜಿಲ್ಲೆಯ ಸರಹದ್ದನ್ನು ವಿಭಜಿಸಿ ಯಾದಗೀರ್, ಷಹಾಪುರ, ಶೋರಾಪುರ ತಾಲ್ಲೂಕುಗಳನ್ನೊಳಗೊಂಡ ಯಾದಗೀರ್ ನೂತನ ಜಿಲ್ಲೆಯನ್ನು ರಚಿಸಿದೆ. ಅದರಂತೆ ಈ ನೂತನ ಜಿಲ್ಲೆಯಲ್ಲಿ ಜಿಲ್ಲಾ ಖಜಾನೆಯನ್ನು ಪ್ರಾರಂಭಿಸಲು ಸರ್ಕಾರದ ಅನುಮತಿ ನೀಡುವಂತೆ ಕೋರಿರುತ್ತಾರೆ. ಪ್ರಸ್ತಾವವನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆಇ 295 ರಾಲೆಪ 2009 ಬೆಂಗಳೂರು, ದಿನಾಂಕ: 06ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಹೊಸದಾಗಿ ರಚನೆಯಾದ ಯಾದಗೀರ್ ಜಿಲ್ಲೆಗೆ ಜಿಲ್ಲಾ ಖಜಾನೆಯನ್ನು ಪ್ರಾರಂಭಿಸಲು ಮಂಜೂರಾತಿ ನೀಡಲಾಗಿದೆ. ಈ ಜಿಲ್ಲೆಯ ವ್ಯಾಪ್ತಿಗೆ ಒಳಪಡುವ ಇತರೆ ಎಲ್ಲಾ ಸರ್ಕಾರಿ ಜಿಲ್ಲಾ ಕಚೇರಿಗಳಿಗೆ ಅಗತ್ಯವಾದ ಹಣಕಾಸಿನ ವ್ಯವಹಾರಗಳು ಅಂದರೆ ಸಿಬ್ಬಂದಿಗಳ ವೇತನ, ಇತರೆ ಭತ್ಯೆಗಳು ಮತ್ತು ಇನ್ನಿತರ ಹಣಕಾಸಿನ ವ್ಯವಹಾರಗಳನ್ನು ಯಾದಗೀರ್ ಉಪ ಖಜಾನೆಯಲ್ಲಿ ವರ್ಷಾಂತ್ಯದವರೆಗೆ ಅಂದರೆ ದಿನಾಂಕ: 31–03–2010ರ ವರೆಗೆ ನಡೆಸಲು ಹಾಗೂ ದಿನಾಂಕ: 01–04–2010ರ ನಂತರ ಯಾದಗೀರ್ ಜಿಲ್ಲಾ ಖಜಾನೆಯಿಂದ ಅಧಿಕೃತವಾಗಿ ಹಣಕಾಸಿನ ವ್ಯವಹಾರವನ್ನು ನಡೆಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಆರ್. 269**

**(ಎನ್. ಶ್ರೀನಿವಾಸ ಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಆಡಳಿತ ಮತ್ತು ಮುಂಗಡ)

**ಆರ್ಥಿಕ ಸಚಿವಾಲಯ**

**ವಿಷಯ :** ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರಿಗೆ 2007ರ ಪರಿಷ್ಕೃತ ವೇತನ ಶ್ರೇಣಿ ವಿಸ್ತರಿಸುವ ಬಗ್ಗೆ.

**ಪ್ರಸ್ತಾವನೆ :–**

ದಿನಾಂಕ 12–01–2001ರ ಸರ್ಕಾರಿ ಆದೇಶ ಸಂಖ್ಯೆ: ಆಇ 25 ಎಸ್‌ಆರ್‌ಪಿ 99 ರಲ್ಲಿ ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ವೇತವ ಶ್ರೇಣಿಯನ್ನು ರೂ. 840–1340 ರಿಂದ ರೂ. 2500–3850ಕ್ಕೆ ದಿನಾಂಕ 01–04–1998 ರಿಂದ ಅನ್ವಯವಾಗುವಂತೆ ಪರಿಷ್ಕರಿಸಲಾಗಿತ್ತು. ಕರ್ನಾಟಕ ನಾಗರಿಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 2007 ರನ್ವಯ ರಾಜ್ಯ ಸರ್ಕಾರಿ ನೌಕರರಿಗೆ ದಿನಾಂಕ 01–07–2005 ರಿಂದ ಜಾರಿಗೆ ಬರುವಂತೆ ವೇತನ ಶ್ರೇಣಿಗಳನ್ನು ಪರಿಷ್ಕರಿಸಿರುವ ಹಿನ್ನೆಲೆಯಲ್ಲಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ ವೇತನ ಶ್ರೇಣಿಯನ್ನು ಪರಿಷ್ಕರಿಸುವ ಬಗ್ಗೆ ಸರ್ಕಾರವು ಪರಿಶೀಲಿಸಿದ್ದು, ಈ ಕೆಳಗಿನಂತೆ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಎಸ್‌ಆರ್‌ಪಿ 2008, ಬೆಂಗಳೂರು, ದಿನಾಂಕ: 16ನೇ ಜನವರಿ 2010**

ಸರ್ಕಾರದ ಎಲ್ಲಾ ಇಲಾಖೆಗಳಲ್ಲಿ ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುತ್ತಿರುವ ಪೂರ್ಣಕಾಲಿಕ ನೌಕರರ 1999ರ ರೂ. 2500–3850 ವೇತನ ಶ್ರೇಣಿಯನ್ನು ರೂ. 4800–7275ಕ್ಕೆ ದಿನಾಂಕ 01–07–2005 ರಿಂದ ಜಾರಿಗೆ ಬರುವಂತೆ ಪರಿಷ್ಕರಿಸಲು ಸರ್ಕಾರವು ಹರ್ಷಿಸುತ್ತದೆ.

ಕರ್ನಾಟಕ ನಾಗರೀಕ ಸೇವಾ (ಪರಿಷ್ಕೃತ ವೇತನ) ನಿಯಮಗಳು, 2007ರ ಉಪಬಂಧಗಳ ಅನುಸಾರ ಅವರ ವೇತನವನ್ನು ಪರಿಷ್ಕೃತ ವೇತನ ಶ್ರೇಣಿಯಲ್ಲಿ ದಿನಾಂಕ 1ನೇ ಜುಲೈ 2005 ರಿಂದ ನಿಗದಿಗೊಳಿಸಿ, ಆರ್ಥಿಕ ಸೌಲಭ್ಯವನ್ನು ಈ ಆದೇಶ ಹೊರಡಿಸಿದ ದಿನಾಂಕದಿಂದ ಭವಿಷ್ಯಾವರ್ತಿಯಾಗಿ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ.ಆರ್. 270**

**(ಸುಂದರ ರಾಜ ಗುಪ್ತ)**
ಸರ್ಕಾರದ ಉಪ ಕಾರ್ಯದರ್ಶಿ,
ಆರ್ಥಿಕ ಇಲಾಖೆ (ಸೇವೆಗಳು–2)

**Department of Personnel & Administrative Reforms Secretariat**

**Sub :** Terms and Conditions of deputation of Sri. K.A. Appaiah, KAS (Senior Scale) Officer as Additional Private Secretary to Hon'ble Minister of External Affairs, New Delhi.

**Read :** Notification No. DPAR 97 SKT 08 dated : 05-06-09

**GOVT. ORDER NO. DPAR 503 SKM 09 BANGALORE, DT. 01-02-2010**

The following terms and conditions of deputation of Sri. K.A. Appaiah, KAS (Senior Scale) Officer as Additional Private Secretary to Hon'ble Minister of External Affairs, New Delhi are as follows :

1. **Period of Deputation :** The Period of deputation of Sri. K.A. Appaiah, KAS (Senior Scale ) Officer shall be for a period w.e.f. 15-06-09, i.e., the date of taking over charge as Additional Private Secretary to Hon'ble Minister of External Affairs, Government of India, New Delhi till 09-11-2009.
2. **Pay :** During the period of deputation, Sri. K.A. Appaiah shall draw pay of the post held by him in Central Government department.
3. **Dearness Allowance :** The officer will be entitled to Dearness Allowance under the rules of the Central Government.
4. **Local Allowance (i.e., H.R.A. / C.C.A) :** The officer will be entitled to Local Allowance (i.e., H.R.A. & C.C.A) under the rules of the Central Government.
5. **Joining time, Pay & transfer Travelling Allowance :** The officer will be entitled to traveling Allowance and Joining Time both on joining the post on deputation and on reversion there

from to the State Government under the rules of the Government of India, the expenditure on this account being borne by the Government of India.

6. **Travelling Allowance :** Travelling Allowance for journey on duty during the period of deputation will have to be regulated under the rules of Government of India.
7. **Medical Concessions :** The officer shall be entitled to medical concessions as admissible under the rules of the Government of India.
8. **Leave and Pension :** During the period of deputation he will be governed by the Leave and Pension Rules of the State Government applicable to him before such deputation.
9. **Leave Salary and pension contribution :** The payment of leave salary and pension contribution shall be regulated in accordance with the provisions of Government of India O.M. No : 14(5)/86/TA/1029,dt : 15-10-86.
10. **Disability Leave Salary :** The Government of India shall be liable to pay to Sri. K.A. Appaiah leave salary towards disability leave in respect of disability, if any, incurred in and trhough service under Government of India.
11. **Residential accommodation :** The officer will be entitled to residential accommodation according, to the rules of the Government of India.
12. **Leave Travel Concessions :** The officer will be entitled to leave travel concessions according to the rules of the Government of Karnataka.
13. **Karnataka State Employees Group Insurance Scheme, 1981 :** The employer shall remit the amount of subscriptions recovered from the Salary of the officer under the Scheme by a cheque or Demand Draft drawn in favour of Concerned Head of the Department/Authority with a Schedule in Annexure-A appended to the Karnataka State Employees Group Insurance Scheme Rules, 1981 for accounting the same under the relevant Head of Account.
14. **Subscription to Insurance Policy in Karnataka Government Insurance Department/General Provident Fund :** The Government servant will continue to subscribe to the Insurance policies in Karnataka Government Insurance Department / General Provident Fund in which he was subscribing at the time of proceeding on deputation to Government of India in accordance with the Karnataka Government Insurance Department/General Provident Fund Rule. The subscription (a) shall be recovered for the salary of the officer and credited to the following Head of Account :

“GPF 8005-Karnataka State Provident Fund

KGID 8011- Insurance and Pension Funds

1. Insurance Funds

15. **Commencement and end of deputation :** The deputation will commence on the date on which the officer hands over charge of his post under the State Government and ends on the date on which he assumes charge of a post under the State Government.
16. **Other concessions not specified :** The officer shall be entitled to and receive from Government of India any other concessions or benefits which he would lhave received in the ordinary course from the State Government, but for his deputation to the Government of India.
17. This Order issues with the concurrence of Finance Department vide its U.O. Note No. FD/1655/Ser-1/09, dated 29-12-2009 and FD/33/Ser-1/2010, dated : 19-01-2010

By Order and in the name of the Governor of Karnataka

H.R. NAGENDRA

Under Secretary to Government

Department of Personnel & Administrative Reforms (Services-2)

P.R.311

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಶ್ರೀ ಎಸ್.ಡಿ. ಪರಮಾಜ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಅಪರ ನಿಬಂಧಕರ (ವಿಚಾರಣೆಗಳು) ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವುದರ ಷರತ್ತಿನ ತಿದ್ದುಪಡಿ ಕುರಿತು.

**ಓದಲಾಗಿದೆ :**
1) ಅಧಿಸೂಚನೆ ಸಂಖ್ಯೆ : ಸಿಆಸುಇ 56 (3) ಸೇಲೋಯು 2008 (ಭಾ) ದಿನಾಂಕ : 27–05–2009.
2) ಶ್ರೀ ಎಸ್. ಡಿ. ಪರಮಾಜ್, ಅಪರ ನಿಬಂಧಕರು, ವಿಚಾರಣೆ–4, ಕರ್ನಾಟಕ ಲೋಕಾಯುಕ್ತ ಇವರ ದಿನಾಂಕ 24–10–2009ರ ಮನವಿ.
3) ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ : ಕಲೋ/ಸಿಬ್ಬಂದಿ(1)/111/2006–07 ದಿನಾಂಕ : 23–11–2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ : 27–05–2009ರ ಆದೇಶದಲ್ಲಿ ಶ್ರೀ ಎಸ್.ಡಿ. ಪರಮಾಜ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಅಪರ ನಿಬಂಧಕ (ವಿಚಾರಣೆಗಳು) ಹುದ್ದೆಗೆ ದಿನಾಂಕ : 8–8–2008ರಿಂದ ಗುತ್ತಿಗೆ ಆಧಾರದ ಮೇಲೆ ಮರುನೇಮಕಾತಿ ಮಾಡಿರುವುದರ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಲಾಗಿದ್ದು 2ನೇ ಷರತ್ತಿನಲ್ಲಿ ಅವರ ಮರುನೇಮಕಾತಿಯ ವೇತನವನ್ನು ರೂ. 5,664/–ಕ್ಕೆ ನಿಗದಿಪಡಿಸಲಾಗಿತ್ತು ಮತ್ತು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲವೇತನಕ್ಕೆ ಕಾಲಕಾಲಕ್ಕೆ ಲಭ್ಯವಾಗುವ ಭತ್ಯೆಗಳೊಂದಿಗೆ ಪಡೆಯಲು ನಮೂದಿಸಲಾಗಿತ್ತು. ಆದರೆ, ಈ ಅಧಿಕಾರಿಯು ದಿನಾಂಕ : 24–10–2009 ರಂದು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ (ಕ್ರಮ ಸಂಖ್ಯೆ 2 ರಲ್ಲಿ ಓದಲಾಗಿದೆ) ಮಹಾಲೇಖಪಾಲರು ನಿಗದಿಪಡಿಸಿರುವ ಪರಿಷ್ಕೃತ ಪಿಂಚಣಿಯಂತೆ ತಮ್ಮ ಮರುನೇಮಕಾತಿಯ ವೇತನವನ್ನು ಪರಿಷ್ಕರಿಸುವಂತೆ ಕೋರಿರುತ್ತಾರೆ. ನಿಬಂಧಕರು ಲೋಕಾಯುಕ್ತ ಇವರು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 93(3) ಸೇಲೋಯು 2009, ಬೆಂಗಳೂರು, ದಿನಾಂಕ : 1ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣದ ಹಿನ್ನೆಲೆಯಲ್ಲಿ, ಕರ್ನಾಟಕ ಲೋಕಾಯುಕ್ತ ದಿನಾಂಕ : 8–8–2008ರಿಂದ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಎಸ್.ಡಿ. ಪರಮಾಜ್ ನಿವೃತ್ತ ಜಿಲ್ಲಾ ನ್ಯಾಯಾಧೀಶರು ಇವರ ಮರುನೇಮಕಾತಿಯ ವೇತನವನ್ನು ಕರ್ನಾಟಕ ನಾಗರೀಕ ನಿಯಮಾವಳಿಗಳಲ್ಲಿನ ನಿಯಮ 313(ಬಿ) ಪ್ರಕಾರವಾಗಿ ರೂ. 14,059/–ಗಳಿಗೆ (ಹದಿನಾಲ್ಕು ಸಾವಿರದ ಐವತ್ತೊಂಬತ್ತು) ನಿಗದಿಪಡಿಸಲಾಗಿದೆ. ಈ ವೇತನದೊಂದಿಗೆ ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನವಾದ ರೂ. 32,100/–ಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಗಳನ್ನು ಪಡೆಯಬಹುದಾಗಿದ್ದು ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲವೆಂಬ ಪರಿಷ್ಕೃತ ಷರತ್ತಿನೊಂದಿಗೆ ಶ್ರೀಯುತರ ಮರುನೇಮಕಾತಿಯು ಈ ಹಿಂದಿನ ಷರತ್ತು ಮತ್ತು ನಿಬಂಧನೆಗಳೊಂದಿಗೆ ಮುಂದುವರೆಯುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 2210 ಸೇ–3/09 ದಿನಾಂಕ : 11–12–2009 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವಾ ನಿಯಮಗಳು–2)

ಪಿ.ಆರ್.312

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ :** ಶ್ರೀ ಬಸವಂತರಾಯ ಪಾಟೀಲ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಅಪರ ನಿಬಂಧಕರ (ವಿಚಾರಣೆಗಳು) ಹುದ್ದೆಗೆ ಗುತ್ತಿಗೆ ಆಧಾರದ ಮೇಲೆ ನೇಮಕಾತಿ ಮಾಡಿರುವುದರ ಷರತ್ತಿನ ತಿದ್ದುಪಡಿ ಕುರಿತು.

**ಓದಲಾಗಿದೆ :** 1) ಅಧಿಸೂಚನೆ ಸಂಖ್ಯೆ : ಸಿಆಸುಇ 56 (1) ಸೇಲೋಯು 2008 (ಭಾ) ದಿನಾಂಕ : 27-05-2009.

2) ಶ್ರೀ ಬಸವಂತರಾಯ ಪಾಟೀಲ್, ಅಪರ ನಿಬಂಧಕರು, (ವಿಚಾರಣೆಗಳು-3) ಕರ್ನಾಟಕ ಲೋಕಾಯುಕ್ತ ಇವರ ದಿನಾಂಕ 16-11-2009ರ ಮನವಿ.

3) **ನಿಬಂಧಕರು, ಕರ್ನಾಟಕ ಲೋಕಾಯುಕ್ತ ಇವರ ಪತ್ರ ಸಂಖ್ಯೆ :** ಕಲೋ/ಸಿಬ್ಬಂದಿ(1)/111/2006-07 ದಿನಾಂಕ : 23-11-2009.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ : 27-05-2009ರ ಆದೇಶದಲ್ಲಿ ಶ್ರೀ ಬಸವಂತರಾಯ ಪಾಟೀಲ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿ ಖಾಲಿಯಿರುವ ಅಪರ ನಿಬಂಧಕ (ವಿಚಾರಣೆಗಳು) ಹುದ್ದೆಗೆ ದಿನಾಂಕ : 8-8-2008ರಿಂದ ಗುತ್ತಿಗೆ ಆಧಾರದ ಮೇಲೆ ಮರುನೇಮಕಾತಿ ಮಾಡಿರುವುದರ ಬಗ್ಗೆ ಷರತ್ತು ಮತ್ತು ನಿಬಂಧನೆಗಳನ್ನು ನಿಗದಿಪಡಿಸಲಾಗಿದ್ದು 2ನೇ ಷರತ್ತಿನಲ್ಲಿ ಅವರ ಮರುನೇಮಕಾತಿಯ ವೇತನವನ್ನು ರೂ. 3,584/-ಕ್ಕೆ ನಿಗದಿಪಡಿಸಲಾಗಿತ್ತು ಮತ್ತು ನಿವೃತ್ತಿ ಹೊಂದುವಾಗ ಪಡೆಯುತ್ತಿದ್ದ ಮೂಲವೇತನಕ್ಕೆ ಕಾಲಕಾಲಕ್ಕೆ ಲಭ್ಯವಾಗುವ ಭತ್ಯೆಗಳೊಂದಿಗೆ ಪಡೆಯಲು ನಮೂದಿಸಲಾಗಿತ್ತು. ಆದರೆ, ಈ ಅಧಿಕಾರಿಯು ದಿನಾಂಕ : 16-11-2009 ರಂದು ಸರ್ಕಾರಕ್ಕೆ ಸಲ್ಲಿಸಿರುವ ಮನವಿಯಲ್ಲಿ (ಕ್ರಮ ಸಂಖ್ಯೆ 2 ರಲ್ಲಿ ಓದಲಾಗಿದೆ) ಮಹಾಲೇಖಪಾಲರು ನಿಗದಿಪಡಿಸಿರುವ ಪರಿಷ್ಕೃತ ಪಿಂಚಣಿಯಂತೆ ತಮ್ಮ ಮರುನೇಮಕಾತಿಯ ವೇತನವನ್ನು ಪರಿಷ್ಕರಿಸುವಂತೆ ಕೋರಿರುತ್ತಾರೆ. ನಿಬಂಧಕರು ಲೋಕಾಯುಕ್ತ ಇವರು ಮೇಲೆ 3 ರಲ್ಲಿ ಓದಲಾದ ಪತ್ರದಲ್ಲಿ ಈ ಬಗ್ಗೆ ಸೂಕ್ತ ಕ್ರಮ ಕೈಗೊಳ್ಳಲು ಕೋರಿರುತ್ತಾರೆ. ಇದನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ : ಸಿಆಸುಇ 93(1) ಸೇಲೋಯು 2009, ಬೆಂಗಳೂರು, ದಿನಾಂಕ : 1ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣದ ಹಿನ್ನೆಲೆಯಲ್ಲಿ, ಕರ್ನಾಟಕ ಲೋಕಾಯುಕ್ತ ಸಂಸ್ಥೆಯಲ್ಲಿರುವ ಅಪರ ನಿಬಂಧಕರ (ವಿಚಾರಣೆಗಳು) ಹುದ್ದೆಯಲ್ಲಿ ಗುತ್ತಿಗೆ ಆಧಾರದ ಮೇಲೆ ದಿನಾಂಕ : 8-8-2008ರಿಂದ ಕರ್ತವ್ಯ ನಿರ್ವಹಿಸುತ್ತಿರುವ ಶ್ರೀ ಬಸವಂತರಾಯ ಪಾಟೀಲ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರ ಮರುನೇಮಕಾತಿಯ ವೇತನವನ್ನು ಕರ್ನಾಟಕ ನಾಗರೀಕ ನಿಯಮಾವಳಿಗಳಲ್ಲಿನ ನಿಯಮ 313(ಬಿ) ಪ್ರಕಾರವಾಗಿ ರೂ. 15,521/-ಗಳಿಗೆ (ಹದಿನೈದು ಸಾವಿರದ ಐದುನೂರ ಇಪ್ಪತ್ತೊಂದು)ಗಳಿಗೆ ನಿಗದಿಪಡಿಸಲಾಗಿದೆ. ಈ ವೇತನದೊಂದಿಗೆ ನಿವೃತ್ತಿ ಸಮಯದಲ್ಲಿ ಪಡೆಯುತ್ತಿದ್ದ ಮೂಲ ವೇತನವಾದ ರೂ. 35,025/-ಕ್ಕೆ ಲಭ್ಯವಾಗುವ ತುಟ್ಟಿಭತ್ಯೆ, ಮನೆಬಾಡಿಗೆ ಭತ್ಯೆ, ನಗರ ಪರಿಹಾರ ಭತ್ಯೆಗಳನ್ನು ಪಡೆಯಬಹುದಾಗಿದ್ದು ನಿವೃತ್ತಿ ವೇತನದ ಮೇಲಿನ ತುಟ್ಟಿಭತ್ಯೆಯನ್ನು ಪಡೆಯುವಂತಿಲ್ಲವೆಂಬ ಪರಿಷ್ಕೃತ ಷರತ್ತಿನೊಂದಿಗೆ ಶ್ರೀಯುತರ ಮರುನೇಮಕಾತಿಯು ಈ ಹಿಂದಿನ ಷರತ್ತು ಮತ್ತು ನಿಬಂಧನೆಗಳೊಂದಿಗೆ ಮುಂದುವರೆಯುತ್ತದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಆಇ 2210 ಸೇ-3/09 ದಿನಾಂಕ : 11-12-2009 ರಲ್ಲಿ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪಿ. ಮಾರ್ಕಂಡೇಯ**

ಪಿ.ಆರ್.313

ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವಾ ನಿಯಮಗಳು-2)

**Department of Personnel and Administrative Reforms Secretariat**

**Sub :** Implementation of the recommendeations of sixth Central Pay Commission to members of All India Service-grant of children education allowance.

**Read :** 1) Government of India O.M.No.12011/03/2008-Estt. (Allowance),dated : 2-9-2008.

2) Government of India letter No. 20011/05/2008-AIS-II, dated 8-9-2008.

**Preamble:**

Government of India, Department of Personnel & Training vide their O.M. dated : 2-9-2008 read at (1) above, have issued orders regarding children educational allowance scheme based on the recommendations of sixth Central Pay Commission. The scheme contemplates reimbursement of tuition

fees. Which can be availed by Government servants upto a maximum of two children and is applicable for children from classes in nursery to 12th including classes 11th and 12th held by junior colleges or schools affiliated to Universities or Boards of Examination. The annual ceiling limit fixed for reimbursement of children education allowance is Rs. 12,000/- Under the scheme reimbursement can be claimed once every quarter. The amount that can be claimed in a quarter more than Rs. 3,000/- and in another quarter less than Rs. 3,000/- subject to the annual ceiling of Rs. 12,000/- being maintained. In case of both the spouses are Government servants, only one of them can avail reimbursement under the children education allowance scheme. The scheme allow contemplates hostel subsidy upto a maximum of Rs. 3,000/- per month per child subject to a maximum of two children. However, both hostel subsidy and children educational allowance **cannot** be availed concurrently.

Government of India vide their letter dated : 8-9-2008 read at (2) above have clarified that grant of children education assistance and reimbursement of tuition fee will also apply to the members of All India Services. This issue has been examined in the State Government and it is ordered as follows:

**Government Order No. DPAR 94 SAS 2009, Bangalore, Dated : 27th January 2010**

In the circumstance explained in the preamble, the State Government is pleased to accord sanction for grant of Children Educational Allowance to the members of All India Service,,subject to the same ceiling limits and also subject to the same conditions as stipulated in the Government of India Order dated : 2-9-2008 and also the guidelines issued from time to time in that regard, and as may be amended from time to time. The Children Educational Allowance sanctioned in this Order shall be available to members of All India Service with immediate effect and no arrears shall be paid for any period earlier to the date of this order.

This issues with the concurrence of Finance Department vide their U.O. Note No. FD/214/Ser-2/2009,dated : 16-1-2010.

By Order and in the name of the Governor of Karnataka

**K.G. ANANTHA**

Under Secretary to Government

P.R.314 DP&AR (Services-1)

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ಸಂಖ್ಯೆ : ಸಿಆಸುಇ 02 ರಾರಾಅ 2010 ಬೆಂಗಳೂರು, ದಿನಾಂಕ : 19–1–2010**

**ಅನಧಿಕೃತ ಟಿಪ್ಪಣಿ**

**ವಿಷಯ :** ಭಾರತದ ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತು ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷ ಜನವರಿ 30 ರಂದು ಮೌನ ಆಚರಿಸುವ ಬಗ್ಗೆ.

**ಉಲ್ಲೇಖ :** ಇದೇ ಸಮಸಂಖ್ಯೆಯ ಅಧಿಕೃತ ಜ್ಞಾಪನ ದಿ : 19–01–2010.

-----

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷವೂ ಜನವರಿ 30ರಂದು ಶ್ರದ್ಧಾಂಜಲಿಯನ್ನು ಅರ್ಪಿಸುತ್ತೇವೆ. ಈ ಸಮಾರಂಭವನ್ನು ಆಚರಿಸುವ ಬಗ್ಗೆ ಸರ್ಕಾರವು ಹೆಚ್ಚಿನ ಪ್ರಾಮುಖ್ಯತೆಯನ್ನು ನೀಡುತ್ತದೆ. ದೇಶದ ಸ್ವಾತಂತ್ರ್ಯಕ್ಕಾಗಿ ಹುತಾತ್ಮರಾದವರ ಸ್ಮರಣಾರ್ಥವಾಗಿ ಈ ಸಮಾರಂಭವನ್ನು ಯಾವ ರೀತಿ ಆಚರಿಸಬೇಕೆಂದು ಉಲ್ಲೇಖಿತ ಅಧಿಕೃತ ಜ್ಞಾಪನದಲ್ಲಿ ಸೂಚನೆಗಳನ್ನು ನೀಡಲಾಗಿದೆ (ಪ್ರತಿಯನ್ನು ಲಗತ್ತಿಸಿದೆ). ಸದರಿ ಅಧಿಕೃತ ಜ್ಞಾಪನದಲ್ಲಿ ನೀಡಿರುವ ಸೂಚನೆಗಳನ್ನು ಗಮನಿಸಿ ಅವುಗಳನ್ನು ದಿನಾಂಕ : 30–01–2010ರ ಶನಿವಾರದಂದು ಕಡ್ಡಾಯವಾಗಿ ಪಾಲಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳನ್ನು ಹಾಗೂ ಇಲಾಖಾ ಮುಖ್ಯಸ್ಥರುಗಳನ್ನು ಕೋರಲಾಗಿದೆ.

**ಬಿ. ವೀರಣ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು.ಇ. (ರಾಜಕೀಯ).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ಸಂಖ್ಯೆ : ಸಿಆಸುಇ 02 ರಾರಾಅ 2010 ಬೆಂಗಳೂರು, ದಿನಾಂಕ : 19–1–2010**

## ಅಧಿಕೃತ ಜ್ಞಾಪನ

**ವಿಷಯ :** ಭಾರತದ ಸ್ವಾತಂತ್ರ್ಯಕ್ಕಾಗಿ ಪ್ರಾಣತೆತ್ತು ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷ ಜನವರಿ 30 ರಂದು ಮೌನ ಆಚರಿಸುವ ಬಗ್ಗೆ.

ಭಾರತದ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಪ್ರಾಣತೆತ್ತು ಹುತಾತ್ಮರಾದವರ ಸ್ಮರಣಾರ್ಥವಾಗಿ ಪ್ರತಿವರ್ಷ ಜನವರಿ 30 ರಂದು, ಪೂರ್ವಾಹ್ನ 11.00 ಘಂಟೆಗೆ ಎಲ್ಲಾ ಕೆಲಸ ಕಾರ್ಯಗಳನ್ನು ಹಾಗೂ ಚಲನೆಯನ್ನು ಸ್ಥಗಿತಗೊಳಿಸಿ ಮೌನ ಆಚರಿಸುವಾಗ ಅನುಸರಿಸಬೇಕಾದ ಕ್ರಮಗಳ ಬಗ್ಗೆ ಪ್ರತಿ ವರ್ಷವೂ ಸೂಚನೆಗಳನ್ನು ನೀಡಲಾಗುತ್ತಿದೆ. ಹುತಾತ್ಮರ ಸ್ಮರಣಾರ್ಥವಾಗಿ ಜನವರಿ 30 ರಂದು ನಡೆಸುವ ಮೌನ ಆಚರಣೆಗೆ ಭಾರತ ಸರ್ಕಾರದ ಸೂಚನೆಗಳಂತೆ ಈ ಕೆಳಕಂಡಂತೆ ಪರಿಷ್ಕೃತ ಸ್ಥಾಯಿ ಸೂಚನೆಗಳನ್ನು ನೀಡಲಾಗಿದೆ.

1. ಜನವರಿ 30ರಂದು ಪೂರ್ವಾಹ್ನ **11.00 ಘಂಟೆಗೆ** ರಾಜ್ಯದೆಲ್ಲೆಡೆ ಎಲ್ಲಾ ಕೆಲಸ ಕಾರ್ಯಗಳನ್ನು ಮತ್ತು ಚಲನೆಯನ್ನು ಸ್ಥಗಿತಗೊಳಿಸಿ **2 ನಿಮಿಷಗಳ ಕಾಲ ಮೌನ ಆಚರಿಸುವುದು.**
2. ಎಲ್ಲಿ ಸೈರನ್‌ಗಳು ಅಥವಾ ಸೈನಿಕರ ಬಂದೂಕುಗಳು ಲಭ್ಯ ಇವೆಯೋ ಅಂತಹ ಕಡೆಗೆ ಎರಡು ನಿಮಿಷಗಳು ಮೌನ ಆಚರಣೆಯ ಕಾಲವನ್ನು ಪ್ರಾರಂಭ ಮತ್ತು ಮುಕ್ತಾಯಕ್ಕೆ ಸೈರನ್ ಅಥವಾ ಸೈನಿಕರ ಬಂದೂಕುಗಳ ಶಬ್ದದ ಮೂಲಕ ಎರಡು ನಿಮಿಷ ಮೌನ ಆಚರಣೆ ಪೂರ್ವಾಹ್ನ 10.59 ರಿಂದ 11.00 ಘಂಟೆಯ ವರೆಗೆ ಸೈರನ್ : ಬಂದೂಕು ಶಬ್ದ ಮಾಡಿಸುವುದು, ಹಾಗೂ ಎರಡು ನಿಮಿಷದ ಮೌನ ಆಚರಣೆ ನಂತರ ಪುನಃ 11.02 ರಿಂದ 11.03 ನಿಮಿಷದವರೆಗೆ ಸೈರನ್ ಶಬ್ದವನ್ನು ಮಾಡಿಸುವುದು, ಈ ಪದ್ಧತಿಯನ್ನು ಸೈರನ್ ಸೌಲಭ್ಯವಿರುವ ಕಡೆ ಅಳವಡಿಸಿಕೊಳ್ಳುವುದು.
3. ಶಬ್ದವು (ಎಲ್ಲಿ ಲಭ್ಯ ಇದೆಯೋ ಅಲ್ಲಿ) ಕೇಳಿದ ಕೂಡಲೇ ಅಲ್ಲಿ ವ್ಯಕ್ತಿಗಳು ಆರಂಭದ ಸೂಚನೆಗಾಗಿ ನಿಂತುಕೊಳ್ಳಬೇಕು ಮತ್ತು ಮೌನವನ್ನು ಆಚರಿಸಬೇಕು. ಪ್ರತಿಯೊಬ್ಬ ವ್ಯಕ್ತಿಯು ತನ್ನ ಕೊಠಡಿಯಲ್ಲಿ ಅಥವಾ ಇತರೆ ಯಾವುದೇ ಸ್ಥಳದಲ್ಲಿ ನಿಂತುಕೊಂಡು ಮೌನ ಆಚರಿಸುವುದಕ್ಕಿಂತ, ಒಂದು ವೇಳೆ ವ್ಯಕ್ತಿಗಳು ಒಂದು ಸ್ಥಳದಲ್ಲಿ ಮೌನ ಆಚರಿಸಿದರೆ ಅದು ತುಂಬಾ ಪರಿಣಾಮಕಾರಿಯಾಗಿ ಮತ್ತು ಪ್ರಭಾವಕಾರಿ (effictive and impressive) ಆಗುತ್ತದೆ. ಆದಾಗ್ಯೂ ಕೆಲಸ ಕಾರ್ಯಗಳಿಗೆ ತೀವ್ರ ತೊಂದರೆ ಆಗುವಂತೆ ಇದ್ದರೆ ಮೇಲೆ ತಿಳಿಸಿದಂತೆ ಒಂದೇ ಸ್ಥಳದಲ್ಲಿ ಸೇರಲು ಪ್ರಯತ್ನಿಸದೇ ಇರಬಹುದು. ಈ 2 ನಿಮಿಷದಲ್ಲಿ ಎಲ್ಲಾ ವರ್ಕ್‌ಶಾಪ್‌ಗಳು ಮತ್ತು ಕಾರ್ಖಾನೆಗಳು ಕೆಲಸ ಸ್ಥಗಿತಗೊಳಿಸಬೇಕು. ಈ 2 ನಿಮಿಷದ ಅವಧಿಯಲ್ಲಿ ವರ್ಕ್‌ಶಾಪ್‌ಗಳು ಕಾರ್ಖಾನೆಗಳು ಪ್ರಸಾರ ಮಾಡುವುದನ್ನು ನಿಲ್ಲಿಸಬೇಕು, ಮತ್ತು ರಸ್ತೆಗಳಲ್ಲಿ ಸಂಚಾರ ಸ್ಥಗಿತಗೊಳಿಸಬೇಕು. ವಿಮಾನಗಳು, ಹಡಗುಗಳು, ರೈಲುಗಳು ಹೊರಡಲು 11–00 A.M. ನಿಗಧಿಪಡಿಸಿದ್ದಲ್ಲಿ ಅಂತಹವುಗಳನ್ನು ಆಯಾ ನಿಲ್ದಾಣಗಳಲ್ಲಿ 2 ನಿಮಿಷಗಳು ತಡೆ ಹಿಡಯಬೇಕು.
4. ಸಂಕೇತ (Signal) ವ್ಯವಸ್ಥೆ ಇರದಂತಹ ಪ್ರದೇಶದಲ್ಲಿ 11–00 A.M. ಗೆ 2 ನಿಮಿಷಗಳ ಮೌನ ಆಚರಿಸಲು ಸಂಬಂಧಪಟ್ಟವರಿಗೆಲ್ಲ ಸೂಕ್ತ ನಿರ್ದೇಶನವನ್ನು ಕಳುಹಿಸುವುದು.
5. ಇಲಾಖಾ ಮುಖ್ಯಸ್ಥರು ಮತ್ತು ಜಿಲ್ಲಾಧಿಕಾರಿಗಳು ವಿವರವಾದ ಕಾರ್ಯಕ್ರಮಗಳನ್ನು ರೂಪಿಸುವ ಸಂಪೂರ್ಣ ಜವಾಬ್ದಾರಿಯುಳ್ಳವರಾಗಿರುತ್ತಾರೆ. (dis-oreation)10-44 A.M. ರಿಂದ 10-56 A.M. ವರೆಗೆ (1) "ಸುಮಿರನ ಕರಲೆ ಮೇರೆ ಮನ್" (2) "ವೈಷ್ಣವೋ ಜನತೋ ತೇನೇ ಕಹಿಯೆ" ಮತ್ತು "ರಘುಪತಿ ರಾಘವ ರಾಜಾರಾಂ" ಈ ಕ್ರಮದಲ್ಲಿ 3 ಭಜನೆಗಳನ್ನು ಹಾಡಬೇಕು ಮತ್ತು ಈ ಕಾರ್ಯಕ್ರಮವು ಸಮಾರಂಭದ ಭಾಗ ಆಗಬಹುದು.
6. ಶಬ್ದ ಮಾಡುವ ಬಗ್ಗೆ ಬಂದೂಕು ಹೊಡೆಯುವುದರಿಂದ ಅಥವಾ Siron ಗಳನ್ನು ಬೆಂಗಳೂರಿನಲ್ಲಿ ಮತ್ತು ಜಿಲ್ಲಾ ಕೇಂದ್ರಗಳಲ್ಲಿ ಮತ್ತು ಇತರ ನಗರ ಪಟ್ಟಣಗಳಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಸೂಕ್ತ ವ್ಯವಸ್ಥೆಗಳನ್ನು ಕರ್ನಾಟಕ ರಾಜ್ಯದ ಆರಕ್ಷಕ ಮಹಾನಿರೀಕ್ಷಕರು ಕ್ರಮ ತೆಗೆದುಕೊಳ್ಳುವುದು.

2. ಕೆಲವು ಕಚೇರಿಗಳಲ್ಲಿ ಈ 2 ನಿಮಿಷಗಳ ಮೌನ ಆಚರಣೆಯನ್ನು ಮಾಡುತ್ತಿರುವಾಗ ಸಾಮಾನ್ಯ ಜನತೆ ಈ ಮೌನ ಆಚರಣೆ ಸಂದರ್ಭದ ಪಾವಿತ್ರ್ಯತೆಯನ್ನು ಗಮನದಲ್ಲಿ ಇಡದೇ ತನ್ನ ಕಾರ್ಯದಲ್ಲಿ ನಿರತವಾಗುವುದನ್ನು ಗಮನಿಸಲಾಗಿದೆ. ಆದುದರಿಂದ ಹುತಾತ್ಮರ ದಿನಾಚರಣೆಯ ಸೂಕ್ತವಾಗಿ ಸಲ್ಲಿಸಬೇಕಾದ ಪಾವಿತ್ರ್ಯತೆ ಮತ್ತು ಸಾಮಾನ್ಯ ಜನತೆಯು ಭಾಗವಹಿಸುವುದರೊಡನೆ ಈ ಹುತಾತ್ಮರ ದಿನಾಚರಣೆಯನ್ನು ತಪ್ಪದೇ ಆಚರಿಸಬೇಕಾಗಿರುವ ಎಲ್ಲಾ ಕಾರ್ಯಕ್ರಮಗಳನ್ನು

ಕೈಗೊಳ್ಳಬೇಕೆಂದು ಸಂಬಂಧಪಟ್ಟ ಎಲ್ಲಾ ಪ್ರಾಧಿಕಾರಗಳಿಗೆ ಸೂಚಿಸಲಾಗಿದೆ. ಈ ಉದ್ದೇಶಕ್ಕಾಗಿ ಕೆಳಕಂಡ ಕ್ರಮಗಳನ್ನು ಕೈಗೊಳ್ಳಬೇಕೆಂದು ಕೋರಲಾಗಿದೆ.

1) ಹುತಾತ್ಮರ ದಿನವನ್ನು ಪೂರ್ಣ ಪಾವಿತ್ರ್ಯತೆ ಮತ್ತು ತಕ್ಕುದಾದ (befitting) ರೀತಿಯಲ್ಲಿ ಆಚರಿಸಲು ರಾಜ್ಯದ ಎಲ್ಲಾ ವಿದ್ಯಾ ಸಂಸ್ಥೆಗಳಿಗೆ ಸೂಚನೆಗಳನ್ನು ನೀಡುವುದು. ಈ ದಿನದ ವಿಶೇಷತ್ವಕ್ಕೆ (significance) ಸಂಬಂಧಿಸಿದಂತೆ ಭಾಷಣಗಳನ್ನು, ಅದರಲ್ಲೂ ವಿಶೇಷವಾಗಿ ಭಾರತದ ಸ್ವಾತಂತ್ರ್ಯದಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಪಾತ್ರವನ್ನು ತಿಳಿಸುವಂತಹ ಭಾಷಣಗಳನ್ನು ಚರ್ಚೆಗಳನ್ನು (talks) ಏರ್ಪಡಿಸಬೇಕು. ಈ ಭಾಷಣಗಳ ಮುಖ್ಯಾಂಶಗಳಲ್ಲಿ ಕಷ್ಟಪಟ್ಟು ಗಳಿಸಿದ ಸ್ವಾತಂತ್ರ್ಯವನ್ನು ಉಳಿಸುವುದು, ಸಂರಕ್ಷಿಸುವುದು ಮತ್ತು ಶ್ರೀಮಂತಗೊಳಿಸುವುದಲ್ಲದೆ ರಾಷ್ಟ್ರದ ಐಕ್ಯತೆಯನ್ನು ಉತ್ತೇಜಿಸುವುದು (promote) ಮತ್ತು ಒಂದೇ ಗುರಿಗಳು ಮತ್ತು ಆದರ್ಶಗಳಿಗೆ (ideal) ಬದ್ಧರಾಗುವ ಅಂಶಗಳನ್ನೊಳಗೊಂಡಿರಬೇಕು.

2) ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಹುತಾತ್ಮರಾದವರ ಪಾತ್ರ ಮತ್ತು ರಾಷ್ಟ್ರೀಯ ಐಕ್ಯತೆಯ (National Integration) ಮೂಲ ಉದ್ದೇಶಗಳು ಇರುವ ಸಾಂಸ್ಕೃತಿಕ ಕಾರ್ಯಕ್ರಮಗಳು Documentary ಚಿತ್ರಗಳ ಪ್ರದರ್ಶನ : ಏರ್ಪಾಡುಗಳನ್ನು ರಾಜ್ಯದ ಪ್ರಚಾರ ಘಟಕಗಳು ಮಾಡಬಹುದು.

3) ಹುತಾತ್ಮರ ದಿನಾಚರಣೆಯನ್ನು ಸೂಕ್ತವಾಗಿ ಆಚರಿಸುವ ಬಗ್ಗೆ ತಮ್ಮ ಸದಸ್ಯರು ಹಾಗೂ ಸಂಯೋಜಿತ ಸಂಘ ಸಂಸ್ಥೆಗಳು ಹುತಾತ್ಮರ ದಿನಾಚರಣೆಯನ್ನು ಖಾತ್ರಿಯಾಗಿ ಸೂಕ್ತವಾಗಿ ಆಚರಿಸಬೇಕೆಂದು Chamber of Commerce ಮತ್ತು ಕೈಗಾರಿಕೆಗಳನ್ನು ಕೋರಬಹುದು.

3. ಸರ್ಕಾರದ ಎಲ್ಲಾ ಪ್ರಧಾನ ಕಾರ್ಯದರ್ಶಿಗಳು, ಕಾರ್ಯದರ್ಶಿಗಳು, ಎಲ್ಲಾ ಪ್ರಾದೇಶಿಕ ಆಯುಕ್ತರು, ಇಲಾಖಾ ಮುಖ್ಯಸ್ಥರು ಎಲ್ಲಾ ಜಿಲ್ಲೆಗಳ ಜಿಲ್ಲಾಧಿಕಾರಿಗಳು ಮತ್ತು ಮತ್ತಿತರೆ ಸಂಬಂಧಪಟ್ಟ ಅಧಿಕಾರಿಗಳು ಮೇಲೆ ಸೂಚಿಸಿರುವ ನಿರ್ದೇಶನಗಳನ್ನು ತಕ್ಕುದಾದ ರೀತಿಯಲ್ಲಿ ಅನುಸರಿಸಲು ಸೂಕ್ತ ಕ್ರಮ ಕೈಗೊಳ್ಳಬೇಕೆಂದು ಕೋರಲಾಗಿದೆ.

**ಬಿ. ವೀರಣ್ಣ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿ.ಆ.ಸು.ಇ (ರಾಜಕೀಯ)

ಪಿ.ಆರ್. 315

**ಶಿಕ್ಷಣ ಸಚಿವಾಲಯ**

**ವಿಷಯ:** ಕೋಲಾರ ಜಿಲ್ಲಾ ಸರ್ಕಾರಿ ಮುದ್ರಣಾಲಯವನ್ನು ಮುಚ್ಚುವ ಬಗ್ಗೆ ಸರ್ಕಾರದ ಆದೇಶ.

**ಓದಲಾಗಿದೆ :** ದಿನಾಂಕ; 18.11.2009ರ ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆ ನಿರ್ದೇಶಕರ ಪತ್ರ ಸಂಖ್ಯೆ: ಡಿಪಿಎಸ್/ಪಿಎಲ್‌ಎನ್–29/2009–10.

**ಪ್ರಸ್ತಾವನೆ:**

ದಿನಾಂಕ: 17.09.2009 ರಂದು ಶಿಕ್ಷಣ ಇಲಾಖೆಯ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ವಿವಿಧ ಜಿಲ್ಲಾ ಸರ್ಕಾರಿ ಮುದ್ರಣಾಲಯಗಳ ಸ್ಥಿತಿಗತಿಗಳ ಬಗ್ಗೆ ಪರಿಶೀಲಿಸಲಾಯಿತು. ಲಾಭದಾಯಕವಲ್ಲದ ಹಾಗೂ ಸರ್ಕಾರಕ್ಕೆ ಹೆಚ್ಚಿನ ಹೊರೆಯಾಗಿರುವ ಹಾಗೂ ಅವಶ್ಯಕತೆಯು ಇಲ್ಲದಂತಹ ಮತ್ತು ಸಾಕಷ್ಟು ಕೆಲಸ ಇಲ್ಲದಂತಹ ಜಿಲ್ಲಾ ಸರ್ಕಾರಿ ಮುದ್ರಣಾಲಯಗಳನ್ನು ಮುಚ್ಚಲು ತೀರ್ಮಾನಿಸಲಾಯಿತು.ಅದರಂತೆ ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಮುದ್ರಣ ಲೇಖನ ಸಾಮಗ್ರಿ ಮತ್ತು ಪ್ರಕಟಣೆಗಳ ಇಲಾಖೆಯ ನಿರ್ದೇಶಕರು ಕೋಲಾರ ಜಿಲ್ಲಾ ಮುದ್ರಣಾಲಯವನ್ನು ಅಭಿವೃದ್ಧಿಪಡಿಸಬೇಕಾದಲ್ಲಿ ಪೂರ್ಣ ಪ್ರಮಾಣದಲ್ಲಿ ಸಿಬ್ಬಂದಿಯನ್ನು ನೇಮಿಸಬೇಕು ಮತ್ತು ಸೂಕ್ತ ರೀತಿಯ ಯಂತ್ರೋಪಕರಣಗಳನ್ನು ಸ್ಥಾಪಿಸಬೇಕಾಗುವುದೆಂದು ಹಾಗೂ ಸ್ಥಳೀಯವಾಗಿ ಉದ್ಭವವಾಗುವ ಕೆಲಸಗಳಿಲ್ಲದೆ ಇರುವ ಹಿನ್ನೆಲೆಯಲ್ಲಿ ಸರ್ಕಾರದ ಹಿತದೃಷ್ಟಿಯಿಂದ ಈ ಮುದ್ರಣಾಲಯಕ್ಕೆ ಬಂಡವಾಳ ಹೂಡುವುದು ಅಪೇಕ್ಷಣೀಯವಾದುದಲ್ಲವೆಂದು ಅಭಿಪ್ರಾಯಪಟ್ಟಿರುವ ಹಿನ್ನೆಲೆಯಲ್ಲಿ ಸದರಿ ಮುದ್ರಣಾಲಯವನ್ನು ಮುಚ್ಚುವ ಬಗ್ಗೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಮಾಡಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಡಿ 570ಇಎಸ್ ಡಬ್ಲೂ2009, ಬೆಂಗಳೂರು, ದಿನಾಂಕ: 20–02–2010.**

ಕೋಲಾರ ಜಿಲ್ಲಾ ಮುದ್ರಣಾಲಯವು ದುಸ್ಥಿತಿಯಲ್ಲಿದ್ದು ಅಲ್ಲಿನ ಯಂತ್ರಗಳು ಅನುಪಯುಕ್ತವಾಗಿರುವ ಹಿನ್ನೆಲೆಯಲ್ಲಿ ಸದರಿ ಮುದ್ರಣಾಲಯವನ್ನು ಈ ಕೆಳಕಂಡ ಷರತ್ತಿಗೆ ಒಳಪಟ್ಟು ತಕ್ಷಣದಿಂದ ಜಾರಿಗೆ ಬರುವಂತೆ ಶಾಶ್ವತವಾಗಿ ಮುಚ್ಚಲು ಆದೇಶಿಸಲಾಗಿದೆ.

1) ಪ್ರಸ್ತುತ ಕೋಲಾರ ಜಿಲ್ಲಾ ಸರ್ಕಾರಿ ಮುದ್ರಣಾಲಯದ ಕಟ್ಟಡವನ್ನು ಸಾರ್ವಜನಿಕ ಗ್ರಂಥಾಲಯ ಇಲಾಖೆಗೆ ಉಚಿತವಾಗಿ ಹಸ್ತಾಂತರಿಸತಕ್ಕದ್ದು.
2) ಸದರಿ ಮುದ್ರಣಾಲಯದ ಸುಸ್ಥಿತಿಯಲ್ಲಿರುವ ಯಂತ್ರೋಪಕರಣಗಳನ್ನು ಬೆಂಗಳೂರಿನ ಕೇಂದ್ರಿಯ ಮುದ್ರಣಾಲಯಕ್ಕೆ ಸ್ಥಳಾಂತರಿಸತಕ್ಕದ್ದು.
3) ಸದರಿ ಮುದ್ರಣಾಲಯದ ಅನುಪಯುಕ್ತ ಹಾಗೂ ಕೆಟ್ಟಿರುವ ಯಂತ್ರೋಪಕರಣಗಳನ್ನು ಟೆಂಡರ್ ಮೂಲಕ ನಿಯಮಾನುಸಾರ ವಿಲೇಮಾಡತಕ್ಕದ್ದು.
4) ಸದರಿ ಮುದ್ರಣಾಲಯದಲ್ಲಿರುವ ಹುದ್ದೆಗಳನ್ನು ಸಿಬ್ಬಂದಿ ಸಮೇತ ಸ್ಥಳಾಂತರಿಸಲು/ರದ್ದುಪಡಿಸಲು/ ಮರುಪದನಾಮೀಕರಣಗೊಳಿಸಲು ಅನುಬಂಧ–1 ರಂತೆ ಕ್ರಮ ಕೈಗೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 664

**(ಎಂ.ಎಸ್. ಸೋಮಶೇಖರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ.

ಅನುಬಂಧ – 1
ಸರ್ಕಾರದ ಆದೇಶ ಸಂಖ್ಯೆ ಇಡಿ 570 ಇ.ಎಸ್.ಡಬ್ಲ್ಯು 2009, ಬೆಂಗಳೂರು ದಿನಾಂಕ 20–2–2010
ಕೋಲಾರ ಸರ್ಕಾರಿ ಜಿಲ್ಲಾ ಮುದ್ರಣಾಲಯದಿಂದ ಸ್ಥಳಾಂತರಿಸಿದ/ರದ್ದು ಪಡಿಸಿದ ಹುದ್ದೆಗಳ ವಿವರ

| ಕ್ರ. ಸಂ. | ಮಂಜೂರಾದ ಹುದ್ದೆಗಳ ವಿವರ | ಕಾರ್ಯ ನಿರ್ವಹಿಸುತ್ತಿರುವವರ ಹೆಸರು ಶ್ರೀ/ಶ್ರೀಮತಿ | ಮಂಜೂರಾದ ಹುದ್ದೆಗಳ ಸಂಖ್ಯೆ | ಭರ್ತಿ ಆಗಿರುವ ಹುದ್ದೆಗಳ ಸಂಖ್ಯೆ | ಖಾಲಿ ಇರುವ ಹುದ್ದೆಗಳ ಸಂಖ್ಯೆ | ಸ್ಥಳಾಂತರಿಸಿದ ಹಾಗೂ ರದ್ದು ಪಡಿಸಿದ ಹುದ್ದೆಗಳ/ಅಧಿಕಾರಿ/ಸಿಬ್ಬಂದಿ ವಿವರ |
|---|---|---|---|---|---|---|
| 1 | ಸಹಾಯಕ ನಿರ್ದೇಶಕರು (ತಾಂತ್ರಿಕ) | ವಿಶ್ವನಾಥ್, ಎಸ್. | 1 | 1 | 0 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವವರನ್ನು ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸಿದೆ |
| 2 | ಅಧೀಕ್ಷಕರು (ಲಿಪಿಕ) | ಸಮೀವುಲ್ಲಾ. ಎಸ್. | 1 | 1 | 0 | –ಮೇಲಿನಂತೆ– |
| 3 | ಮೇಲ್ವಿಚಾರಕರು | ಜ್ಞಾನೇಂದ್ರ ಕುಮಾರ್ | 1 | 1 | 0 | –ಮೇಲಿನಂತೆ– |
| 4 | ಅಗ್ರಿಕಾರ್ಮಿಕರು | 1, ಎನ್. ಚಂದ್ರ 2. ಬಿ.ಎಂ. ಯಶೋಧರ | 2 | 2 | 0 | –ಮೇಲಿನಂತೆ– |
| 5 | ಪ್ರಥಮ ದರ್ಜೆ ಸಹಾಯಕರು | 1, ಲಕ್ಷ್ಮೀದೇವಿ 2. ಡಿ. ಮೂಡಲೇಗೌಡ | 2 | 2 | 0 | –ಮೇಲಿನಂತೆ– |
| 6 | ದ್ವಿತೀಯ ದರ್ಜೆ ಸಹಾಯಕರು | 1. ಎಸ್. ಗಿರೀಶ್‌ಕುಮಾರ್ 2. ಫಾರುಕ್ ಅಮೀನ್ ಶಾದತ್ | 8 | 2 | 6 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಕೆಲಸಗಾರರನ್ನು ಸರ್ಕಾರಿ ಕೇಂದ್ರ ಮುದ್ರಣಾಲಯಕ್ಕೆ ಸ್ಥಳಾಂತರಿಸಲಾಗಿದೆ ಹಾಗೂ 6 ಖಾಲಿ ಹುದ್ದೆಗಳನ್ನು ರದ್ದು ಪಡಿಸಲಾಗಿದೆ |
| 7 | ಹಿರಿಯ ಕರಡು ಪರೀಕ್ಷಕರು | – | 1 | – | 1 | ಖಾಲಿ ಹುದ್ದೆಯನ್ನು ರದ್ದು ಪಡಿಸಲಾಗಿದೆ |
| 8 | ಮೋನೋ ಆಪರೇಟರ್ | – | 2 | 0 | 2 | –ಮೇಲಿನಂತೆ– |
| 9 | ಹಿರಿಯ ಆಫ್‌ಸೆಟ್ ಮುದ್ರಕರು | ಡಿ.ಹೆಚ್. ಪ್ರಭುಲಿಂಗ ಮುದುರೆ | 1 | 1 | 0 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಸಿಬ್ಬಂದಿಯನ್ನು ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸಲಾಗಿದೆ. |
| 10 | ಹಿರಿಯ ಬಡಗಿ | – | 1 | 0 | 1 | ಖಾಲಿ ಹುದ್ದೆಯನ್ನು ರದ್ದು ಪಡಿಸಲಾಗಿದೆ |
| 11 | ಪ್ಲೇಟ್ ಮೇಕರ್ | – | 1 | 0 | 1 | –ಮೇಲಿನಂತೆ– |

| | | | | | | |
|---|---|---|---|---|---|---|
| 12 | ಕಿರಿಯ ಕರಡು ಪರೀಕ್ಷಕರು | ಎಂ. ನಾಗರಾಜಯ್ಯ | 5 | 1 | 4 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಕೆಲಸಗಾರರನ್ನು ಸರ್ಕಾರಿ ಕೇಂದ್ರ ಮುದ್ರಣಾಲಯಕ್ಕೆ ಸ್ಥಳಾಂತರಿಸಲಾಗಿದೆ ಹಾಗೂ 4 ಖಾಲಿ ಹುದ್ದೆಗಳನ್ನು ರದ್ದು ಪಡಿಸಲಾಗಿದೆ. |
| 13 | ಬೈಂಡರ್ | – | 1 | 0 | 1 | ಖಾಲಿ ಹುದ್ದೆಯನ್ನು ರದ್ದು ಪಡಿಸಲಾಗಿದೆ |
| 14 | ದ್ವಿತೀಯ ದರ್ಜೆ ಸಹಾಯಕರು (ಕೈ) | – | 1 | – | 1 | –ಮೇಲಿನಂತೆ– |
| 15 | ಸಹಾಯಕ ಡಿಟಿಪಿ ಆಪರೇಟರ್ | – | 4 | 0 | 4 | –ಮೇಲಿನಂತೆ– |
| 16 | ಸಹಾಯಕ ಆಫ್‌ಸೆಟ್ ಮುದ್ರಕರು | 1, ತಿರುಮಲ ಗಂಗ ಭೈರಪ್ಪ<br>2. ಪಿ. ಗುರುರಾಜ್ | 5 | 2 | 3 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಕೆಲಸಗಾರರನ್ನು ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸಿದೆ ಹಾಗೂ ಖಾಲಿ ಇರುವ 3 ಹುದ್ದೆಗಳನ್ನು ರದ್ದು ಪಡಿಸಲಾಗಿದೆ. |
| 17 | ಫಿಟ್ಟರ್ | – | 1 | 0 | 1 | ಖಾಲಿ ಹುದ್ದೆಯನ್ನು ರದ್ದು ಪಡಿಸಲಾಗಿದೆ |
| 18 | ಸಹಾಯಕ ಬೈಂಡರ್ | 1, ಎಲ್. ಯೋಗಾನಂದ<br>2. ಆಲ್ಬರ್ಟ್ ಸಂದೀಪ್<br>3. ಎಸ್. ಯೋಗೀಶ್<br>4. ಸಿ.ಎನ್. ಚಂದ್ರಶೇಖರ್ | 15 | 4 | 11 | ತುಂಬಲಾಗಿರುವ ನಾಲ್ಕು ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಕೆಲಸಗಾರರನ್ನು ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು ಇಲ್ಲಿಗೆ ಸ್ಥಳಾಂತರಿಸಲಾಗಿದೆ ಹಾಗೂ ಮಿಕ್ಕ 11 ಖಾಲಿ ಹುದ್ದೆಗಳನ್ನು ರದ್ದು ಪಡಿಸಲಾಗಿದೆ. |
| 19 | ವೈರ್‌ಮನ್ | – | 1 | 0 | 1 | ಖಾಲಿ ಹುದ್ದೆಗಳನ್ನು ರದ್ದು ಪಡಿಸಲಾಗಿದೆ |
| 20 | ಕಾವಲುಗಾರ | ಎನ್. ನರೇಂದ್ರ | 1 | 1 | 0 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಕೆಲಸಗಾರರನ್ನು ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು. ಇಲ್ಲಿಗೆ ಸ್ಥಳಾಂತರಿಸಲಾಗಿದೆ |
| 21 | ಪ್ಯಾಕರ್ | 1, ಅರ್. ಶಂಕೇಶ್<br>2. ಬಿ.ಸಿ. ಗುರುಪ್ರಸಾದ | 2 | 2 | 0 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಕೆಲಸಗಾರರನ್ನು ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು. ಇಲ್ಲಿಗೆ ಸ್ಥಳಾಂತರಿಸಲಾಗಿದೆ |
| 22 | ಜವಾನ (ಲಿಪಿಕ) | 1, ಬಿ.ಎನ್. ಮಂಜುನಾಥ್<br>2. ಆರ್. ಲೀಲಾವತಿ<br>3. ಎನ್. ರಾಜೇಶ್ | 3 | 3 | 0 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಕೆಲಸಗಾರರನ್ನು ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು. ಇಲ್ಲಿಗೆ ಸ್ಥಳಾಂತರಿಸಲಾಗಿದೆ |
| 23 | ಜೀಪ್ ಡ್ರೈವರ್ | – | 1 | – | 1 | ಖಾಲಿ ಹುದ್ದೆಗಳನ್ನು ರದ್ದು ಪಡಿಸಲಾಗಿದೆ. |
| 24 | ಸ್ವೀಪರ್ | 1, ಎನ್. ಮಂಜುಳ<br>2. ನಂಜುಂಡ | 2 | 2 | 0 | ಹುದ್ದೆ ಸಮೇತ ಕೆಲಸ ನಿರ್ವಹಿಸುತ್ತಿರುವ ಕೆಲಸಗಾರರನ್ನು ಸರ್ಕಾರಿ ಹೊರವಲಯ ಮುದ್ರಣಾಲಯ, ಬೆಂಗಳೂರು. ಇಲ್ಲಿಗೆ ಸ್ಥಳಾಂತರಿಸಲಾಗಿದೆ |
| | | **ಒಟ್ಟು** | **63** | **25** | **38** | |

**(ಎಂ.ಎನ್. ಸೋಮಶೇಖರ್)**
ಸರ್ಕಾರದ ಅಧೀನ ಕಾರ್ಯದರ್ಶಿಗಳು
ಶಿಕ್ಷಣ ಇಲಾಖೆ

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕು, ಸಾರವಾಡ ಗ್ರಾಮದ ಹತ್ತಿರ ದೋಣಿ ನದಿಗೆ ಪ್ರವಾಹ ಸಂರಕ್ಷಣೆ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009(1) ದಿನಾಂಕ: 28-02-09.
2. ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ-9/ಸಾರವಾಡ ಪ್ರಸಂಕಾ/2009-10/7516, ದಿನಾಂಕ 16-12-2009.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರ ಪತ್ರ ಸಂಖ್ಯೆ: ಮುಸದ/ಆಪ್ತಶಾಖೆ/ಟೆಂಡರ್/09-10/134, ದಿನಾಂಕ: 13-01-10.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕು ಸಾರವಾಡ ಗ್ರಾಮದ ಹತ್ತಿರ ದೋಣಿ ನದಿಗೆ ಪ್ರವಾಹ ಸಂರಕ್ಷಣೆ ಕಾಮಗಾರಿಯ 150.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 28-02-09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿ: 16-09-09 |
| 2 | ಪ್ರಜಾವಾಣಿ ಕನ್ನಡ ದಿನಪತ್ರಿಕೆ ಹಾಗೂ ಟೈಮ್ಸ್ ಆಫ್ ಇಂಡಿಯಾ ಆಂಗ್ಲ ಪತ್ರಿಕೆ | ದಿ: 24-09-09 |
| 3 | ವಿಜಯ ಕರ್ನಾಟಕ ದಿನಪತ್ರಿಕೆ | ದಿ: 25-09-09 |
| 4 | ಕರ್ನಾಟಕ ರಾಜ್ಯಪತ್ರ | ದಿ: 01-10-09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 12 ಜನ ಗುತ್ತಿಗೆದಾರರಲ್ಲಿ ನಿಗದಿತ ದಿನದಂದು ಇಬ್ಬರು ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್‌ನ್ನು ದಿನಾಂಕ 24-11-09 ರಂದು ತೆರೆಯಲಾಗಿ ಈ ಪೈಕಿ ಒಬ್ಬ ಗುತ್ತಿಗೆದಾರರು ಮಾತ್ರ ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ನ್ನು ದಿನಾಂಕ 25-11-09 ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 1,43,76,492/- |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 1,35,39,476/- |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಎಸ್.ಸಿ. ಚಿಕ್ಕರೆಡ್ಡಿ<br>1ನೇ ದರ್ಜೆ ಗುತ್ತಿಗೆದಾರರು | ರೂ. 1,72,01,505/- | 19.65 ಹೆಚ್ಚು | 27.05 ಹೆಚ್ಚು |

ಮೇಲ್ಕಂಡಂತೆ ಶ್ರೀ ಎಸ್.ಸಿ. ಚಿಕ್ಕರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರ್‌ನಲ್ಲಿ ನಮೂದಿಸಿದ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 27.05 ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–01–10 ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,35,39,476–00 ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,55,02,700–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ಸಿ. ಚಿಕ್ಕರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿರುವ ಮೇರೆಗೆ ಸಮಿತಿಯ ಅಧ್ಯಕ್ಷರು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಈ ಬಗ್ಗೆ ಮುಂದಿನ ಕ್ರಮಕ್ಕಾಗಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 11 ಪ್ರನಿಕಾ 2009, ಬೆಂಗಳೂರು, ದಿನಾಂಕ 01ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ ಹಾಗೂ ತಾಲ್ಲೂಕು, ಸಾರವಾಡ ಗ್ರಾಮದ ಹತ್ತಿರ ದೋಣಿ ನದಿಗೆ ಪ್ರವಾಹ ಸಂರಕ್ಷಣೆ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,35,39,476–00ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,55,02,700–00ಗಳಿಗೆ (ಒಂದು ಕೋಟಿ ಐವತ್ತೈದು ಲಕ್ಷದ ಎರಡು ಸಾವಿರದ ಏಳುನೂರು ರೂ.ಗಳು ಮಾತ್ರ) ಶ್ರೀ ಎಸ್.ಸಿ. ಚಿಕ್ಕರೆಡ್ಡಿ, 1ನೇ ದರ್ಜೆ ಗುತ್ತಿಗೆದಾರರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 326

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ಕಮಲನಗರ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**

1. ಸರ್ಕಾರದ ಆದೇಶ ಸಂಖ್ಯೆ: ಸನೀಇ 28 ಅಪಿಬಂ 2000, ದಿನಾಂಕ: 31–03–08.
2. ಪತ್ರ ಸಂಖ್ಯೆ: ಮುಇಂ/ಸನೀ(ಉ)ವಲಯ/ಬಿಜೆಪಿ/ಎಇ–6/2009–10/7813, ದಿನಾಂಕ 30–12–2009.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/134, ದಿನಾಂಕ: 13–01–10.

**ಪ್ರಸ್ತಾವನೆ :**

ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ಕಮಲನಗರ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ 67.50 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ(1)ರಲ್ಲಿ ಓದಲಾದ ದಿನಾಂಕ 31-03–2000ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೀದರ್ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಪ್ರಿ ಕ್ವಾಲಿಫಿಕೇಷನ್ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ: 10–06–09 |
| 2 | ಕರ್ನಾಟಕ ರಾಜ್ಯಪತ್ರ | ದಿ: 23–07–09 |
| 3 | ವಿಜಯ ಕರ್ನಾಟಕ ದಿನಪತ್ರಿಕೆ | ದಿ: 27–07–09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 7 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನಾಂಕದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಅವರ ತಾಂತ್ರಿಕ ಬಿಡ್‌ಗಳನ್ನು ದಿನಾಂಕ 08–10–09 ರಂದು ಪರಿಶೀಲಿಸಿದ್ದು, ಅಂದೇ ಅವರ ಆರ್ಥಿಕ ಬಿಡ್‌ಗಳನ್ನು ಸಹ ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 67,01,501/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 1,33,38,084/– |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಗುರುನಾಥ್ ಕೊಳ್ಳೂರ<br>1ನೇ ದರ್ಜೆ ಗುತ್ತಿಗೆದಾರರು | ರೂ. 1,74,47,673/– | 160.00 ಹೆಚ್ಚು | 30.81 ಹೆಚ್ಚು |
| 2 | ಮೆ: ಬಾಲಾಜಿ ಕನ್‌ಸ್ಟ್ರಕ್ಷನ್<br>1ನೇ ದರ್ಜೆ ಗುತ್ತಿಗೆದಾರರು | ರೂ. 1,81,84,227/– | 170.98 ಹೆಚ್ಚು | 36.33 ಹೆಚ್ಚು |

ಮೇಲ್ಕಂಡಂತೆ ಕ್ರ.ಸಂ.: 1ರಲ್ಲಿರುವ ಶ್ರೀ ಗುರುನಾಥ್ ಕೊಳ್ಳೂರ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ಮೊತ್ತ ರೂ. 1,74,47,673–00ಗಳು ಅತಿ ಕಡಿಮೆ ಮೊತ್ತವಾಗಿದ್ದು, ಇವರು ನಮೂದಿಸಿರುವ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 30.81 ರಷ್ಟು ಹೆಚ್ಚಾಗಿದ್ದು. ಈ ಮೊತ್ತಕ್ಕೆ ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–01–10ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 1,33,38,084–00 ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,52,72,106–00ಗಳಿಗೆ ಕಾಮಗಾರಿಯನ್ನು ಶ್ರೀ ಗುರುನಾಥ್ ಕೊಳ್ಳೂರ, 1ನೇ ದರ್ಜೆ ಗುತ್ತಿಗೆದಾರರು ಬೀದರ್ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 104 ಅಪಿಬಂ 2009, ಬೆಂಗಳೂರು, ದಿನಾಂಕ 01ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೀದರ್ ಜಿಲ್ಲೆ ಔರಾದ್ ತಾಲ್ಲೂಕಿನ ಕಮಲನಗರ ಗ್ರಾಮದ ಹತ್ತಿರ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 1,33,38,084–00ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 1,52,72,106–00ಗಳಿಗೆ (ಒಂದು ಕೋಟಿ ಐವತ್ತೆರಡು ಲಕ್ಷದ ಎಪ್ಪತ್ತೆರಡು ಸಾವಿರದ ನೂರಆರು ರೂ.ಗಳು

ಮಾತ್ರ) ಶ್ರೀ ಗುರುನಾಥ್ ಕೊಳ್ಳೂರ, 1ನೇ ದರ್ಜೆ ಗುತ್ತಿಗೆದಾರರು ಬೀದರ್ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗಧಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 327

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬೆಳಗಾಂ ಜಿಲ್ಲೆ, ಖಾನಾಪುರ ತಾಲ್ಲೂಕು, ಸಾಗರೆ ಹತ್ತಿರ ತಟ್ಟಿಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ದಿನಾಂಕ: 05–02–09ರ ಸರ್ಕಾರದ ಆದೇಶ ಸಂಖ್ಯೆ: ಸನೀಇ 02 ನಯೋಕಾ 09.
2. ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ವಿಜಾಪುರ/ಸ.ಇಂ–1/2009–10/6990, ದಿನಾಂಕ 24–11–2009.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರ ದಿನಾಂಕ 13–01–10ರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/134.

**ಪ್ರಸ್ತಾವನೆ :**

ಮೇಲೆ (1)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ರೂ. 14477.85 ಲಕ್ಷ ಅಂದಾಜು ಮೊತ್ತದ 260 ಕಾಮಗಾರಿಗಳ ಅಂದಾಜುಗಳಿಗೆ ಆರ್.ಐ.ಡಿ.ಎಫ್–14ರಡಿ ಆಡಳಿತಾತ್ಮಕ ಅನುಮೋದನೆ ನೀಡಿದ್ದು ಅವುಗಳ ಪೈಕಿ 87.00 ಲಕ್ಷ ರೂ.ಗಳ ಅಂದಾಜಿನ ಬೆಳಗಾಂ ಜಿಲ್ಲೆ. ಖಾನಾಪುರ ತಾಲ್ಲೂಕು, ಸಾಗರೆ ಹತ್ತಿರ ತಟ್ಟಿಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯೂ ಸಹ ಸೇರಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬೆಳಗಾಂ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ಜಿಲ್ಲಾ ಟೆಂಡರ್ ಬುಲೆಟಿನ್ | ದಿ: 24–08–09 |
| 2 | ಕರ್ನಾಟಕ ರಾಜ್ಯಪತ್ರ | ದಿ: 27–08–09 |
| 3 | ಪ್ರಜಾವಾಣಿ ದಿನಪತ್ರಿಕೆ ಮತ್ತು ಹಿಂದು ಆಂಗ್ಲ ದಿನಪತ್ರಿಕೆ | ದಿ: 28–08–09 |
| 4 | ವಿಜಯ ಕರ್ನಾಟಕ ದಿನಪತ್ರಿಕೆ | ದಿ: 29–08–09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 17 ಜನ ಗುತ್ತಿಗೆದಾರರ ಪೈಕಿ ಇಬ್ಬರು ಗುತ್ತಿಗೆದಾರರು ಮಾತ್ರ ನಿಗದಿತ ದಿನಾಂಕದಂದು ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಅವರ ತಾಂತ್ರಿಕ ಬಿಡ್‌ಗಳನ್ನು ದಿನಾಂಕ 26–09–09 ರಂದು ತೆರೆಯಲಾಗಿದ್ದು, ಅದರಲ್ಲಿ ಒಬ್ಬರು ಗುತ್ತಿಗೆದಾರರು ಮಾತ್ರ ಅರ್ಹರಾಗಿರುತ್ತಾರೆ. ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 69,51,334/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 69,32,355/– |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಆರ್.ಡಿ. ಪದ್ಮನ್ನವರ 1ನೇ ದರ್ಜೆ ಗುತ್ತಿಗೆದಾರರು | ರೂ. 83,41,244/– | 19.99 ಹೆಚ್ಚು | 20.32 ಹೆಚ್ಚು |

ಮೇಲ್ಕಂಡಂತೆ ಶ್ರೀ ಆರ್.ಡಿ. ಪದ್ಮನ್ನವರ, 1ನೇ ದರ್ಜೆ ಗುತ್ತಿಗೆದಾರರು ಇವರು ನಮೂದಿಸಿರುವ ದರಗಳಂತೆ ಟೆಂಡರ್ ಮೊತ್ತ ರೂ. 83,41,244–00ಗಳಾಗಿದ್ದು, ಇದನ್ನು ಪ್ರಸಕ್ತ ಸಾಲಿನ ದರಗಳಿಗೆ ಪರಿಗಣಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇ. 20.32 ರಷ್ಟು ಹೆಚ್ಚಾಗಿರುತ್ತದೆ. ಸದರಿಯವರ ಟೆಂಡರ್‌ನ್ನು ಸಂಧಾನದ ಮೂಲಕ ಅಂಗೀಕರಿಸಲು ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರರವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–01–10ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 69,32,355–00 ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 79,37,546–00ಗಳಿಗೆ ಕಾಮಗಾರಿಯನ್ನು ಶ್ರೀ ಆರ್.ಡಿ. ಪದ್ಮನ್ನವರ, 1ನೇ ದರ್ಜೆ ಗುತ್ತಿಗೆದಾರರು, ಬೆಳಗಾಂ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಶಿಫಾರಸ್ಸು ಮಾಡಿರುವ ಮೇರೆಗೆ ಸಮಿತಿಯ ಅಧ್ಯಕ್ಷರು ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರು ಇವರು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಪ್ರಸ್ತಾವನೆಯನ್ನು ಮುಂದಿನ ಕ್ರಮಕ್ಕಾಗಿ ಸಲ್ಲಿಸಿರುತ್ತಾರೆ ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 96 ಅಪಿಬಂ 2009, ಬೆಂಗಳೂರು, ದಿನಾಂಕ 01ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬೆಳಗಾಂ ಜಿಲ್ಲೆ ಖಾನಾಪುರ ತಾಲ್ಲೂಕು, ಸಾಗರ ಹತ್ತಿರ ತಟ್ಟಿಹಳ್ಳಕ್ಕೆ ಅಡ್ಡಲಾಗಿ ಬ್ರಿಡ್ಜ್ ಕಂ ಬ್ಯಾರೇಜ್ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 69,32,355–00ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 79,37,546–00ಗಳಿಗೆ (ಎಪ್ಪತ್ತೊಂಬತ್ತು ಲಕ್ಷದ ಮೂವತ್ತೇಳು ಸಾವಿರದ ಐನೂರ ನಲವತ್ತಾರು ರೂ.ಗಳು ಮಾತ್ರ) ಶ್ರೀ ಆರ್.ಡಿ. ಪದ್ಮನ್ನವರ, 1ನೇ ದರ್ಜೆ ಗುತ್ತಿಗೆದಾರರು ಬೆಳಗಾಂ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**(ಕೆ. ಸುಧಾಕರ ಶೆಟ್ಟಿ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 328

## ಜಲ ಸಂಪನ್ಮೂಲ ಸಚಿವಾಲಯ

**ವಿಷಯ :** ಬಿಜಾಪುರ ಜಿಲ್ಲೆ, ಬ.ಬಾಗೇವಾಡಿ ತಾಲ್ಲೂಕು, ಕೊಲ್ಹಾರ ಹತ್ತಿರ ಸೇತುವೆ ಸಹಿತ ಬಂದಾರ ನಿರ್ಮಾಣ ಕಾಮಗಾರಿಯ ಟೆಂಡರ್ ಅಂಗೀಕರಿಸುವ ಕುರಿತು.

**ಓದಲಾಗಿದೆ :**
1. ಸರ್ಕಾರದ ಆದೇಶ ಸಂಖ್ಯೆ: ಸನೀಇ 15 ಮಸಾವಿ 2009(5), ದಿನಾಂಕ: 28–02–09.
2. ಪತ್ರ ಸಂಖ್ಯೆ: ಮುಇಂ/ಸನೀ(ಉ)ವ/ಬಿಜೆಪಿ/ಪಿಬಿ–9/ಕೊಲ್ಹಾರ ಬಿಸಿಬಿ/2009–10/7517, ದಿನಾಂಕ 16–12–2009.
3. ಅಧ್ಯಕ್ಷರು, ಟೆಂಡರ್ ಪರಿಶೀಲನಾ ಸಮಿತಿ, ಸಣ್ಣ ನೀರಾವರಿ ಇಲಾಖೆ ಹಾಗೂ ಮುಖ್ಯ ಇಂಜಿನಿಯರ್, ಸಣ್ಣ ನೀರಾವರಿ ದಕ್ಷಿಣ ವಲಯ, ಬೆಂಗಳೂರುರವರ ಪತ್ರ ಸಂಖ್ಯೆ: ಮುಸದ/ಆಪ್ತ ಶಾಖೆ/ಟೆಂಡರ್/09–10/134, ದಿನಾಂಕ: 13–01–10.

**ಪ್ರಸ್ತಾವನೆ :**

ಬಿಜಾಪುರ ಜಿಲ್ಲೆ, ಬ. ಬಾಗೇವಾಡಿ ತಾಲ್ಲೂಕು, ಕೊಲ್ಹಾರ ಹತ್ತಿರ ಸೇತುವೆ ಸಹಿತ ಬಂದಾರ ನಿರ್ಮಾಣ ಮಾಡುವ ಕಾಮಗಾರಿಯ 331.00 ಲಕ್ಷ ರೂ.ಗಳ ಅಂದಾಜು ಪಟ್ಟಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ 28–02–09ರ ಆದೇಶದಲ್ಲಿ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಕಾಮಗಾರಿಯನ್ನು ಕೈಗೊಳ್ಳಲು ಬಿಜಾಪುರ ಸಣ್ಣ ನೀರಾವರಿ ವಿಭಾಗದಿಂದ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮದಡಿ ದ್ವಿಲಕೋಟೆ ಪದ್ಧತಿಯಲ್ಲಿ ಕರೆಯಲಾದ ಟೆಂಡರ್‌ನ ಪ್ರಕಟಣೆಯನ್ನು ಈ ಕೆಳಕಂಡ ಮಾಧ್ಯಮಗಳಲ್ಲಿ ಪ್ರಕಟಿಸಲಾಗಿದೆ.

| | | |
|---|---|---|
| 1 | ರಾಜ್ಯ ಟೆಂಡರ್ ಬುಲೆಟಿನ್ | ದಿ: 16–09–09 |
| 2 | ಪ್ರಜಾವಾಣಿ ಕನ್ನಡ ದಿನಪತ್ರಿಕೆ ಹಾಗೂ ಟೈಮ್ಸ್ ಆಫ್ ಇಂಡಿಯಾ ಆಂಗ್ಲ ಪತ್ರಿಕೆ | ದಿ: 24–09–09 |
| 3 | ವಿಜಯ ಕರ್ನಾಟಕ ದಿನಪತ್ರಿಕೆ | ದಿ: 25–09–09 |
| 4 | ಕರ್ನಾಟಕ ರಾಜ್ಯಪತ್ರ | ದಿ: 01–10–09 |

ಈ ಟೆಂಡರ್ ಕರೆಗೆ ಪ್ರತಿಕ್ರಯಿಸಿ ಖಾಲಿ ಟೆಂಡರ್ ಫಾರಂ ಪಡೆದ 13 ಜನ ಗುತ್ತಿಗೆದಾರರ ನಿಗದಿತ ದಿನಾಂಕದಂದು ನಾಲ್ಕು ಜನ ಗುತ್ತಿಗೆದಾರರು ಮಾತ್ರ ಭರ್ತಿ ಮಾಡಿದ ಟೆಂಡರ್‌ಗಳನ್ನು ಸಲ್ಲಿಸಿರುತ್ತಾರೆ. ಸ್ವೀಕರಿಸಲಾದ ತಾಂತ್ರಿಕ ಬಿಡ್‌ಗಳನ್ನು ದಿನಾಂಕ 24–11–09 ರಂದು ತೆರೆಯಲಾಗಿ ಈ ಪೈಕಿ ಇಬ್ಬರು ಗುತ್ತಿಗೆದಾರರು ಅರ್ಹತೆ ಹೊಂದಿದ್ದು, ಇವರ ಆರ್ಥಿಕ ಬಿಡ್‌ನ್ನು ದಿನಾಂಕ 25–11–2009ರಂದು ತೆರೆಯಲಾಗಿದೆ. ಆರ್ಥಿಕ ಬಿಡ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳ ತುಲನಾತ್ಮಕ ವಿವರ ಕೆಳಕಂಡಂತಿದೆ:

| | |
|---|---|
| ಮಂಜೂರಾದ ಅಂದಾಜಿನ ದರಗಳಂತೆ ಟೆಂಡರಿಗೆ ಇಡಲಾದ ಮೊತ್ತ | ರೂ. 3,25,78,037/– |
| ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಟೆಂಡರಿಗೆ ಇಡಲಾದ ಮೊತ್ತ | ರೂ. 3,23,46,121/– |

| ಕ್ರ. ಸಂ. | ಗುತ್ತಿಗೆದಾರರ ಹೆಸರು ಮತ್ತು ದರ್ಜೆ ಶ್ರೀ/ಮೆಸರ್ಸ್ | ಟೆಂಡರ್‌ನಲ್ಲಿ ಗುತ್ತಿಗೆದಾರರು ನಮೂದಿಸಿರುವ ದರಗಳಂತೆ ಟೆಂಡರಿನ ಮೊತ್ತ | ಮಂಜೂರಾದ ಅಂದಾಜಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ | ಪ್ರಸಕ್ತ ಸಾಲಿನ ದರಗಳ ಮೇಲಿನ ಶೇಕಡಾವಾರು ಹೆಚ್ಚಳ |
|---|---|---|---|---|
| 1 | ಎಸ್.ವಿ ಬಂಡಿ, 1ನೇ ದರ್ಜೆ ಗುತ್ತಿಗೆದಾರರು | ರೂ. 4,21,87,418/– | 29.49 ಹೆಚ್ಚು | 30.42 ಹೆಚ್ಚು |
| 2 | ಮೆ: ಮಸ್ತಾನಯ್ಯ, 1ನೇ ದರ್ಜೆ ಗುತ್ತಿಗೆದಾರರು | ರೂ. 4,65,66,899/– | 42.94 ಹೆಚ್ಚು | 43.96 ಹೆಚ್ಚು |

ಮೇಲ್ಕಂಡಂತೆ ಅತಿ ಕಡಿಮೆ ಮೊತ್ತ ನಮೂದಿಸಿರುವ ಕ್ರ.ಸಂ. (1)ರಲ್ಲಿರುವ ಶ್ರೀ ಎಸ್.ವಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರು ಇವರು ಟೆಂಡರಿನಲ್ಲಿ ನಮೂದಿಸಿರುವ ದರಗಳನ್ನು ಪ್ರಸಕ್ತ ಸಾಲಿನ ದರಗಳಂತೆ ಪರಿಷ್ಕರಿಸಿದ ಟೆಂಡರ್‌ಗಿಟ್ಟ ಮೊತ್ತಕ್ಕೆ ಹೋಲಿಸಿದಾಗ ಶೇಕಡ 30.42 ರಷ್ಟು ಹೆಚ್ಚಾಗಿದ್ದು. ಸದರಿಯವರ ಟೆಂಡರ್‌ನ್ನು ಅಂಗೀಕರಿಸಲು ಮುಖ್ಯ

ಇಂಜಿನಿಯರ್, ಸಣ್ಣ ನೀರಾವರಿ ಉತ್ತರ ವಲಯ, ಬಿಜಾಪುರ ಇವರು ಮೇಲೆ (2)ರಲ್ಲಿ ಓದಲಾದ ಪತ್ರದಲ್ಲಿ ಸರ್ಕಾರದ ಅನುಮೋದನೆ ಕೋರಿರುತ್ತಾರೆ.

ಗುತ್ತಿಗೆದಾರರು ಸೂಚಿಸಿರುವ ದರಗಳನ್ನು ಕಡಿಮೆಗೊಳಿಸುವ ಸಲುವಾಗಿ ಗುತ್ತಿಗೆದಾರರೊಂದಿಗೆ ಸಂಧಾನ ನಡೆಸಲು ದಿನಾಂಕ 13–01–10ರಂದು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯ ಸಭೆಯನ್ನು ಕರೆಯಲಾಗಿತ್ತು. ಸಭೆಯಲ್ಲಿ ಗುತ್ತಿಗೆದಾರರ ಮನವಿಯನ್ನು ಕೂಲಂಕಷವಾಗಿ ಪರಿಶೀಲಿಸಿದ ನಂತರ ಪ್ರಸಕ್ತ ಸಾಲಿನ ದರಪಟ್ಟಿಯ ದರಗಳನ್ನು ಪರಿಗಣಿಸಿದಾಗ ಪರಿಷ್ಕರಿಸಿದ ಟೆಂಡರಿಗಿಡಲಾದ ಮೊತ್ತ ರೂ. 3,23,46,121–00 ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 3,70,36,309–00ಗಳಿಗೆ ಕಾಮಗಾರಿಯನ್ನು ಶ್ರೀ ಎಸ್.ವಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರು ವಿಜಾಪುರ ಇವರಿಗೆ ವಹಿಸಲು ಸಭೆಯಲ್ಲಿ ತೀರ್ಮಾನಿಸಲಾಯಿತು. ಈ ನಿರ್ಧಾರಕ್ಕೆ ಗುತ್ತಿಗೆದಾರರು ತಮ್ಮ ಒಪ್ಪಿಗೆಯನ್ನು ಸೂಚಿಸಿರುವುದಾಗಿ ತಿಳಿಸಿ ಈ ಮೊತ್ತಕ್ಕೆ ಟೆಂಡರ್ ಅಂಗೀಕರಿಸಲು ಇಲಾಖಾ ಟೆಂಡರ್ ಪರಿಶೀಲನಾ ಸಮಿತಿಯು ಮೇಲೆ 3ರಲ್ಲಿ ಓದಲಾದ ಪತ್ರದಲ್ಲಿ ಶಿಫಾರಸ್ಸು ಮಾಡಿದೆ.

ಮೇಲಿನ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸನೀಇ 94 ಅಪಿಬಂ 2009, ಬೆಂಗಳೂರು, ದಿನಾಂಕ 01ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಬಿಜಾಪುರ ಜಿಲ್ಲೆ, ಬ.ಬಾಗೇವಾಡಿ ತಾಲ್ಲೂಕು ಕೊಲ್ಹಾರ ಹತ್ತಿರ ಸೇತುವೆ ಸಹಿತ ಬಂದಾರ ನಿರ್ಮಾಣ ಕಾಮಗಾರಿಯ ಮಂಜೂರಾದ ಅಂದಾಜು ಪಟ್ಟಿ ಹಾಗೂ ಪ್ರಸಕ್ತ ಸಾಲಿನ ದರಪಟ್ಟಿಯಂತೆ ಪರಿಷ್ಕರಿಸಿದ ಟೆಂಡರಿಗೆ ಇಡಲಾದ ಮೊತ್ತ ರೂ. 3,23,46,121–00ಗಳ ಮೇಲೆ ಶೇಕಡ 14.50 ರಷ್ಟು ಹೆಚ್ಚಿನ ದರಗಳಿಗೆ ಅಂದರೆ ರೂ. 3,70,36,309–00ಗಳಿಗೆ (ಮೂರು ಕೋಟಿ ಎಪ್ಪತ್ತು ಲಕ್ಷದ ಮೂವತ್ತಾರು ಸಾವಿರದ ಮುನ್ನೂರ ಒಂಭತ್ತು ರೂ.ಗಳು ಮಾತ್ರ) ಶ್ರೀ ಎಸ್.ವಿ. ಬಂಡಿ, 1ನೇ ದರ್ಜೆ ಗುತ್ತಿಗೆದಾರರು, ಬಿಜಾಪುರ ಇವರಿಗೆ ಕಾಮಗಾರಿಯನ್ನು ಕೆಳಕಂಡ ಷರತ್ತುಗಳೊಂದಿಗೆ ವಹಿಸಲು ಸರ್ಕಾರವು ಅನುಮೋದನೆ ನೀಡಿದೆ.

1. ಕಾಮಗಾರಿಯನ್ನು ನಿಗದಿತ ಅವಧಿಯಲ್ಲಿ ಪೂರ್ಣಗೊಳಿಸತಕ್ಕದ್ದು.
2. ಸರ್ಕಾರದ ಅನುಮತಿ ಪಡೆಯದೆ ಕಾಮಗಾರಿಯಲ್ಲಿ ಯಾವುದೇ ಹೆಚ್ಚುವರಿ ಕೆಲಸ ನಿರ್ವಹಿಸಬಾರದು.
3. ಅಸಹಜ ದರಗಳನ್ನು ಸಮನ್ವಯಪಡಿಸಿಕೊಳ್ಳುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 2002 ದಿನಾಂಕ: 20–01–2003ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ನೀಡಿರುವ ಆರ್ಥಿಕಾಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**(ಕೆ. ಸುಧಾಕರ ಶೆಟ್ಟಿ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)

ಪಿ.ಆರ್. 329

**ಸಹಕಾರ ಸಚಿವಾಲಯ**

ತಿದ್ದುಪಡಿ

ಸಂಖ್ಯೆ: ಸಇ 132 ಎಸಸೇ 2008, ಬೆಂಗಳೂರು, ದಿನಾಂಕ 30–01–2010.

ಸರ್ಕಾರದ ಆದೇಶ ಸಂಖ್ಯೆ: ಸಇ 132 ಎಸಸೇ 2009, ದಿನಾಂಕ: 25–01–2010ರ ಆದೇಶದಲ್ಲಿನ ಪ್ರಸ್ತಾವನೆ ಭಾಗದ ಕೊನೆಯ ಪ್ಯಾರಾದಲ್ಲಿರುವ " ಮೇಲೆ ಓದಲಾದ (3)ರಲ್ಲಿರುವ ಪ್ರಧಾನ ಕಾರ್ಯದರ್ಶಿ, ಸಹಕಾರ ಇಲಾಖೆ ಇವರು ಒಪ್ಪಿ ಮೇಲ್ಮನವಿದಾರರ ಮನವಿಯನ್ನು ಮಾನವೀಯ ದೃಷ್ಠಿಯಿಂದ ಪರಿಗಣಿಸಿ, ಸಹಕಾರ ಸಂಘಗಳ ನಿಬಂಧಕರು ದಿನಾಂಕ 04–11–2008ರಲ್ಲಿ ವಿಧಿಸಿರುವ ದಂಡನೆಯನ್ನು ರದ್ದುಪಡಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ " ಎಂಬ ವಾಕ್ಯ ವೃಂದವನ್ನು ಸದರಿ ಆದೇಶದಿಂದ ಶಾಶ್ವತವಾಗಿ ಕೈಬಿಡಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ನಂಜುಂಡಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ

ಸಹಕಾರ ಇಲಾಖೆ

ಪಿ.ಆರ್. 341

## ಸಹಕಾರ ಸಚಿವಾಲಯ

**ವಿಷಯ :** ಕುವೆಂಪು ನೂತನ ಮಾದರಿ ಗೃಹ ನಿರ್ಮಾಣ ಸಹಕಾರ ಸಂಘ ನಿಯಮಿತ, ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :** ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ : ಹೆಚ್‌ಎಸ್–1/88/ಹೆಚ್‌ಹೆಚ್‌ಎಸ್/2009–10, ದಿನಾಂಕ : 15–12–2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಕುವೆಂಪು ನೂತನ ಮಾದರಿ ಗೃಹ ನಿರ್ಮಾಣ ಸಂಘ ನಿ., ಬೆಂಗಳೂರು ಇದು ಆರ್ಥಿಕ ಸಂಕಷ್ಟದಲ್ಲಿದ್ದು, ಸಂಘದ ವಾರ್ಷಿಕ ಸಾಮಾನ್ಯ ಸಭೆ ನಡೆಸಲು ಹಾಗೂ ಆಡಳಿತ ಮಂಡಳಿಗೆ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲವೆಂದೂ ಹಾಗೂ ಸಂಘದ ಲೆಕ್ಕಗಳು 1996–97ರಿಂದ ಆಡಿಟ್ ಆಗಿರುವುದಿಲ್ಲವೆಂದೂ, ಸಂಘದಲ್ಲಿ ಸರಿಯಾದ ಸಿಬ್ಬಂದಿ ಇರುವುದಿಲ್ಲವೆಂದೂ ಸಂಘದಲ್ಲಿ ಸುಮಾರು 1575 ಜನ ಸದಸ್ಯರಿರುವುದಾಗಿಯೂ ತಿಳಿಸಿ ದಿನಾಂಕ : 14–11–2009 ರಿಂದ ಮುಂದಿನ 6 ತಿಂಗಳ ಅವಧಿಗೆ ಆಡಳಿತಗಾರರ ಅವಧಿಯನ್ನು ವಿಸ್ತರಿಸಲು ಶಿಫಾರಸ್ಸು ಮಾಡಿರುತ್ತಾರೆ.

ಸದರಿ ಪ್ರಸ್ತಾವವನ್ನು ಕೂಲಂಕುಷವಾಗಿ ಪರಿಗಣಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಸಿಓ 12 ಸಿಎಲ್‌ಎಂ 2010 ಬೆಂಗಳೂರು, ದಿನಾಂಕ: 23ನೇ ಜನವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಸಂಗತಿಗಳ ಹಿನ್ನೆಲೆಯಲ್ಲಿ ಕುವೆಂಪು ನೂತನ ಮಾದರಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದರ ಆಡಳಿತಗಾರರ ಅವಧಿಯನ್ನು ದಿನಾಂಕ : 14–11–2009 ರಿಂದ 13–05–2010ರವರೆವಿಗೆ ವಿಸ್ತರಿಸಲು ಅನುವಾಗುವಂತೆ ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 121ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಸದರಿ ಅಧಿನಿಯಮದ ಪ್ರಕರಣ 30(1) ಈ ಕೆಳಕಂಡ ಮಾರ್ಪಾಟುಗಳೊಂದಿಗೆ ಕುವೆಂಪು ನೂತನ ಮಾದರಿ ಗೃಹ ನಿರ್ಮಾಣ ಸಹಕಾರ ಸಂಘ ನಿ., ಬೆಂಗಳೂರು ಇದಕ್ಕೆ ಅನ್ವಯವಾಗತಕ್ಕದ್ದೆಂದು ನಿರ್ದೇಶಿಸುತ್ತದೆ, ಎಂದರೆ :–

ಕರ್ನಾಟಕ ಸಹಕಾರ ಸಂಘಗಳ ಅಧಿನಿಯಮ 1959ರ ಪ್ರಕರಣ 30 ಉಪಪ್ರಕರಣ (1)ರಲ್ಲಿನ **"ಆರು ತಿಂಗಳು"** ಎಂಬ ಪದಗಳಿಗೆ ಬದಲಾಗಿ **"ಇಪ್ಪತ್ತನಾಲ್ಕು ತಿಂಗಳು"** ಎಂಬ ಪದಗಳನ್ನು ಪ್ರತಿಯೋಜಿಸತಕ್ಕದ್ದು.

**ಸೂಚನೆ :** ಪ್ರಕರಣ 30 ಉಪ–ಪ್ರಕರಣ(1)ಕ್ಕೆ ಮಾಡಿದ ಈ ಮಾರ್ಪಾಡು ದಿನಾಂಕ : 13–05–2010ರವರೆಗೆ ಜಾರಿಯಲ್ಲಿರತಕ್ಕದ್ದು. ಈ ಅವಧಿ ಮುಗಿದ ನಂತರ ಈ ಆದೇಶದ ಮಾರ್ಪಾಡಿಗೆ ಮೊದಲು ಜಾರಿಯಲ್ಲಿದ್ದಂತೆ ಸದರಿ ಪ್ರಕರಣ 30 ಉಪಪ್ರಕರಣ (1)ರಲ್ಲಿನ ಉಪಬಂಧಗಳು ಪುನಃ ಜಾರಿಗೆ ಬರತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 342

**(ಆರ್.ಎಸ್. ಹುಚ್ಚಾಚಾರಿ)**
ವಿಶೇಷ ಕರ್ತವ್ಯಾಧಿಕಾರಿ ಹಾಗೂ ಪದನಿಮಿತ್ತ
ಸರ್ಕಾರದ ಜಂಟಿ ಕಾರ್ಯದರ್ಶಿ, ಸಹಕಾರ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಮೈಸೂರು ಸಕ್ಕರೆ ಕಾರ್ಖಾನೆ (ನಿ) ಮಂಡ್ಯ – ಸಹವಿದ್ಯುತ್ ಘಟಕ ಸ್ಥಾಪನೆಗಾಗಿ ಡಿಬೆಂಚರ್‌ಗಳ ಮೂಲಕ ಸಂಗ್ರಹಿಸಿದ್ದ 14.84 ಕೋಟಿ ರೂ.ಗಳ ಅಸಲು ಮತ್ತು ಬಡ್ಡಿಯನ್ನು ಮರುಪಾವತಿ ಮಾಡುವ ಬಗ್ಗೆ.

**ಓದಲಾಗಿದೆ :**
1. ಕೆನರಾ ಬ್ಯಾಂಕ್‌ರವರ ಪತ್ರ ಸಂಖ್ಯೆ : FM/LOW/ETT/DT :431 : 844 : 2009-10 SKS ದಿನಾಂಕ 17–12–2009
2. ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆ ರವರ ಪತ್ರ ಸಂಖ್ಯೆ : ಎಂಎಸ್‌ಕೋ/ಎಂಡಿ/ಡಿಓ/2009/782 ದಿನಾಂಕ 22–12–09.

**ಪ್ರಸ್ತಾವನೆ :**

ಮೇಲೆ ಓದಲಾದ (1)ರಲ್ಲಿರುವ ಕೆನರಾ ಬ್ಯಾಂಕ್, ಬೆಂಗಳೂರು ಶಾಖೆಯ ಡಿಬೆಂಚರ್ ಟ್ರಸ್ಟಿ ಡಿಪಾರ್ಟ್‌ಮೆಂಟ್‌ನ ಅಸಿಸ್ಟಂಟ್ ಜನರಲ್ ಮ್ಯಾನೇಜರ್‌ರವರ ಪತ್ರದಲ್ಲಿ ಮೈಸೂರು ಸಕ್ಕರೆ ಕಾರ್ಖಾನೆಯು ಡಿಬೆಂಚರ್ ಮೂಲಕ 14.84 ಕೋಟಿ ರೂ.ಗಳನ್ನು ಸಂಗ್ರಹಿಸಿದ್ದು, ಈ ಹಣಕ್ಕೆ ರಾಜ್ಯ ಸರ್ಕಾರವು ಗ್ಯಾರಂಟಿ ನೀಡಿದ ಕಾರಣ ಅಸಲು ಮತ್ತು ಬಡ್ಡಿ ಸೇರಿ ಒಟ್ಟು

16,17,11,240/- ರೂ.ಗಳನ್ನು ಒಪ್ಪಂದದ ಪ್ರಕಾರ ದಿನಾಂಕ 30-12-2009ರೊಳಗೆ ಸಂಬಂಧಿಸಿದ ಬ್ಯಾಂಕ್ ಅಕೌಂಟ್‌ನಲ್ಲಿ ಜಮೆ ಮಾಡಬೇಕೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (2)ರಲ್ಲಿರುವ ವ್ಯವಸ್ಥಾಪಕ ನಿರ್ದೇಶಕರು ಮೈಸೂರು ಸಕ್ಕರೆ ಕಾರ್ಖಾನೆರವರ ಪತ್ರದಲ್ಲಿ ಕಾರ್ಖಾನೆಯಲ್ಲಿ ಸ್ಥಾಪಿಸಲಾಗಿರುವ ಸಹವಿದ್ಯುತ್ ಘಟಕಕ್ಕೆ ಡಿಬೆಂಚರ್‌ಗಳ ಮೂಲಕ ಕೆನರಾ ಬ್ಯಾಂಕ್ ವತಿಯಿಂದ ಸಂಗ್ರಹಿಸಲಾಗಿದ್ದ ಹಣವನ್ನು ದಿನಾಂಕ 15-01-2010ರೊಳಗೆ ಬಡ್ಡಿಯೊಂದಿಗೆ ಮರುಪಾವತಿಸಬೇಕಾಗಿದ್ದು, ಕಾರ್ಖಾನೆಯು ಆರ್ಥಿಕ ಸಂಕಷ್ಟದಲ್ಲಿರುವುದರಿಂದ ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಮರುಪಾವತಿ ಮಾಡಲು ಈ ಹಣವನ್ನು ಸರ್ಕಾರದಿಂದ ಒದಗಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದ್ದು, ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಅಸಲು ಮತ್ತು ಬಡ್ಡಿ ಹಣ ಪಾವತಿಸಲು ಹಣ ಬಿಡುಗಡೆಗೊಳಿಸಲು ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಐ 16 ಎಸ್‌ಜಿಎಫ್ 2009, ದಿನಾಂಕ: 1ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೈಸೂರು ಸಕ್ಕರೆ ಕಾರ್ಖಾನೆ (ನಿ), ಮಂಡ್ಯ ಈ ಕಾರ್ಖಾನೆಯು ಸಹವಿದ್ಯುತ್ ಘಟಕ ಸ್ಥಾಪನೆಗಾಗಿ ಡಿಬೆಂಚರ್ ಹೋಲ್ಡರ್ಸ್‌ಗಳ ಮೂಲಕ ಸಂಗ್ರಹಿಸಲಾಗಿದ್ದ 14.84 ಕೋಟಿ ರೂ.ಗಳಿಗೆ ದಿನಾಂಕ 15-01-2010ರವರೆಗೆ ನೀಡಬೇಕಾದ ಬಡ್ಡಿ ಹಣ 1,33,11,240/- ರೂ.ಗಳು ಸೇರಿ ಒಟ್ಟು 16,17,11,240/- ರೂ.ಗಳನ್ನು ಪಾವತಿಸುವ ಸಲುವಾಗಿ ಸರ್ಕಾರದಿಂದ 10,72,11,240/- ರೂ.ಗಳನ್ನು (ಹತ್ತು ಕೋಟಿ ಎಪ್ಪತ್ತೆರಡು ಲಕ್ಷದ ಹನ್ನೊಂದು ಸಾವಿರದ ಇನ್ನೂರ ನಲವತ್ತು ರೂ.ಗಳು ಮಾತ್ರ) ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದ ಹಣವನ್ನು ಕಾರ್ಖಾನೆಯಲ್ಲಿ ಲಭ್ಯವಿರುವ 5,45,00,000/- ರೂ.ಗಳನ್ನು ಉಪಯೋಗಿಸಿಕೊಂಡು ಒಟ್ಟು 16,17,11,240/- ರೂ.ಗಳನ್ನು ಡಿಬೆಂಚರ್ ಹೋಲ್ಡರ್ಸ್‌ಗಳಿಗೆ ಪಾವತಿಸುವ ಸಲುವಾಗಿ ಸಂಬಂಧಪಟ್ಟ ಬ್ಯಾಂಕಿಗೆ ವರ್ಗಾಯಿಸಲು ಸರ್ಕಾರದ ಮಂಜೂರಾತಿ ನೀಡಿದೆ.

2009-10ನೇ ಸಾಲಿನ ಅನುದಾನದಲ್ಲಿ ಈ ಉದ್ದೇಶಕ್ಕಾಗಿ ಯಾವುದೇ ಹಣವನ್ನು ಒದಗಿಸಿರುವುದಿಲ್ಲ. ಕಾರ್ಖಾನೆಯ ಪುನಃಶ್ಚೇತನ ಸಂಬಂಧ ಲೆಕ್ಕ ಶೀರ್ಷಿಕೆ "4852-02-190-0-04 (ಯೋಜನೆ) " ಅಡಿಯಲ್ಲಿ ಒದಗಿಸಲಾಗಿರುವ 50.00 ಕೋಟಿ ರೂ.ಗಳಲ್ಲಿ ಈ ಹಣವನ್ನು ಬಿಡುಗಡೆಗೆ ಮಂಜೂರಾತಿ ನೀಡಲಾಗಿದೆ.

ಹಣ ಸೆಳೆಯುವ ಅಧಿಕಾರಿಯು ಸಹಾಯಕ ನಿರ್ದೇಶಕರು (ಹೆಚ್.ಆರ್.ಡಿ. ಆಡಳಿತ ಮತ್ತು ಇಎಂ) ಜಿಲ್ಲಾ ಕೈಗಾರಿಕಾ ಕೇಂದ್ರ ಮಂಡ್ಯ, ಆಗಿದ್ದು ಸದರಿಯವರು ಹಣ ಸೆಳೆಯುವ ಬಿಲ್ಲನ್ನು ಆಯುಕ್ತರು, ಕಬ್ಬು ಅಭಿವೃದ್ಧಿ ಹಾಗೂ ಸಕ್ಕರೆ ನಿರ್ದೇಶಕರು, ಬೆಂಗಳೂರು ಇವರ ಮೇಲು ಸಹಿಯೊಂದಿಗೆ ಖಜಾನೆಗೆ ಸಲ್ಲಿಸಬೇಕು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ : ಎಫ್‌ಡಿ 60 ವೆಚ್ಚ-1/2010 ದಿನಾಂಕ 23-01-2010ರಲ್ಲಿ ನೀಡಲಾದ ಸಹಮತಿಯಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 343

**(ಪಿ. ಆನಂದಕುಮಾರ್)**
ಪೀಠಾಧಿಕಾರಿ (ಸಕ್ಕರೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ 2009-10ನೇ ಸಾಲಿನ ಆಯವ್ಯಯದ ಯೋಜನೆ ಬಾಬ್ತಿನಲ್ಲಿ ನಿಗದಿಪಡಿಸಿರುವ ಅನುದಾನ ರೂ. 25.00 ಲಕ್ಷಗಳನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ : ಡಿಎಎಂ : ಎಸಿಟಿ : 1:16:2009-10, ದಿನಾಂಕ 18-11-2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 18-11-2009ರ ಪತ್ರದಲ್ಲಿ, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು 2008-09ನೇ ಸಾಲಿನಲ್ಲಿ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ಸರ್ಕಾರದ ಆದೇಶ ಸಂಖ್ಯೆ : ಕಸಂವಾಪ್ರ 8 ಕೆಎಂಯು 2009, ದಿನಾಂಕ 16-02-2009 ರಲ್ಲಿ ರೂ. 25.00 ಲಕ್ಷಗಳನ್ನು ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡಲಾಗಿದ್ದು, ಅದಕ್ಕೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುವುದರಿಂದ ಈ ಸಾಲಿನಲ್ಲಿ ಅಂದರೆ 2009-10ನೇ

ವರ್ಷದಲ್ಲಿ ನಿಗದಿ ಪಡಿಸಲಾದ ಅನುದಾನ ರೂ. 25.00 ಲಕ್ಷಗಳನ್ನು ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ ಕಸಂವಾಪ್ರ 158 ಕೆಎಂಯು 2009, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2009–10ನೇ ವರ್ಷದಲ್ಲಿ ಹಂಪಿ ವಿಶ್ವಪರಂಪರೆ ಪ್ರದೇಶ ನಿರ್ವಹಣಾ ಪ್ರಾಧಿಕಾರಕ್ಕೆ ಹೆಚ್ಚುವರಿಯಾಗಿ ಮಂಜೂರಾದ ಹುದ್ದೆಗಳಿಗೆ ವೇತನ ಹಾಗೂ ಭತ್ಯೆಗಳನ್ನು ಪಾವತಿಸಲು ನಿಗದಿಪಡಿಸಲಾದ ಅನುದಾನ ರೂ.25.00 ಲಕ್ಷಗಳನ್ನು (ರೂಪಾಯಿ ಇಪ್ಪತ್ತೈದು ಲಕ್ಷಗಳು ಮಾತ್ರ) ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಬಿಡುಗಡೆ ಮಾಡಿ ಆದೇಶಿಸಿದೆ.

ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–0–18–101 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು ಹಾಗೂ ಬಿಡುಗಡೆಗೊಳಿಸಿದ ಅನುದಾನಕ್ಕೆ ಹಣ ಬಳಕೆ ಪ್ರಮಾಣ ಪತ್ರವನ್ನು ಒದಗಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ 12–01–2010ರ ಟಿಪ್ಪಣಿ ಸಂಖ್ಯೆ : ಶಿಇ 58 ಐಎಫ್ (ಬಿ&ಎ) 2010ರಲ್ಲಿ ಸಹಮತಿ ಪಡೆದು ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ : ಎಫ್‌ಡಿ 1 ಟಿ.ಎಫ್.ಪಿ. 96 ದಿನಾಂಕ : 10–7–96ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 344

**(ಎಂ. ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಶಿವಮೊಗ್ಗ ಜಿಲ್ಲೆ, ಹೊಸನಗರ ತಾಲ್ಲೂಕು ರಿಪ್ಪನ್‌ಪೇಟೆಯಲ್ಲಿ ಸಮುದಾಯ ಭವನ ನಿರ್ಮಾಣ ಮಾಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರ ಪತ್ರ ಸಂಖ್ಯೆ : ಕಸನಿ/10/ಸಾಭ/2009–10, ದಿನಾಂಕ 30–10–2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 30–10–2009ರ ಪತ್ರದಲ್ಲಿ, ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಇವರು ಹೊಸನಗರ ತಾಲ್ಲೂಕು ಒಕ್ಕಲಿಗರ ಸಂಘ (ನೋಂ) ರಿಪ್ಪನ್ ಪೇಟೆ, ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ, ಇವರು ಮಾನ್ಯ ಮುಖ್ಯಮಂತ್ರಿಗಳಿಗೆ ಮನವಿಯನ್ನು ಸಲ್ಲಿಸಿ, ಮೇಲ್ಕಂಡ ಸಂಘವು ರಿಪ್ಪನ್‌ಪೇಟೆಯನ್ನು ಕೇಂದ್ರ ಸ್ಥಾನವನ್ನಾಗಿ ಹೊಂದಿದ್ದು ತಾಲ್ಲೂಕಿನ ಕಲ್ಲೂರು, ಹಾಲುಗುಡ್ಡೆ, ಕೋಟೆತಾರಿಗ, ಗುಬ್ಬಿಗ, ಬೈರಾಪುರ, ಕೆರೆಹಳ್ಳಿ, ಜೇನಿ, ತಳಲೆ, ಹೊರಲಕೊಪ್ಪ, ಕೋಡೂರು, ಮೂಗುಡ್ತಿ, ಹೆದ್ದಾರಿಪುರ, ಗರ್ತಿಕೆರೆ, ಹುಂಚಾ, ತಾರಿಗ ಇನ್ನೂ ಮುಂತಾದ ಊರುಗಳಲ್ಲಿ ಬಹಳ ಸಂಖ್ಯೆಯಲ್ಲಿ ಒಕ್ಕಲಿಗರ ಬಂಧುಗಳು ವಾಸವಾಗಿದ್ದು, ಹಾಗೂ ತಾಲ್ಲೂಕಿನ ವಿವಿಧ ಭಾಗಗಳಾದ ಚಕ್ರ–ವರಾಹಿ ಸಾವೆಹಕ್ಕಲು ಇನ್ನಿತರ ಮುಳುಗಡೆ ಭಾಗದ ಬಹಳ ಸಂಖ್ಯೆಯ ಜನಾಂಗದವರು ಇಲ್ಲಿ ಬಂದು ನೆಲೆಸಿರುತ್ತಾರೆ. ಈ ಸಂಘವು 20 ವರ್ಷಗಳಿಂದ ಹಲವಾರು ಸಮಾಜ ಸೇವೆ, ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಂಡು ಬಂದಿರುತ್ತದೆ. ಇದಕ್ಕಾಗಿ ಸರ್ಕಾರದಿಂದ 2 ಎಕರೆ ಕೃಷಿ ಜಮೀನನ್ನು ಪಡೆದಿದ್ದು, ಈ ಜಾಗವು ವಾಣಿಜ್ಯಕರಣಕ್ಕೆ ಪರಿವರ್ತಿತೆಯಾಗಿರುತ್ತದೆ. ಸಂಘವು ರಿಪ್ಪನ್‌ಪೇಟೆಯಲ್ಲಿ ಸಮುದಾಯ ಭವನ ನಿರ್ಮಿಸಲು ಉದ್ದೇಶಿಸಿ, ಇದಕ್ಕೆ ತಗಲಬಹುದಾದ ಅಂದಾಜು ವೆಚ್ಚ ರೂ. 50.00 ಲಕ್ಷಗಳಾಗಿದ್ದು, ಸರ್ಕಾರದಿಂದ ಅನುದಾನ ನೀಡಲು ಕೋರಿರುತ್ತಾರೆ, ಈ ಯೋಜನೆ ಬಗ್ಗೆ ಮಾನ್ಯ ಮುಖ್ಯಮಂತ್ರಿಗಳು ರೂ. 10.00 ಲಕ್ಷ ಅನುದಾನ ಬಿಡುಗಡೆ ಮಾಡಲು ಆದೇಶಿಸಿರುವುದರಿಂದ ಕಾರ್ಯದರ್ಶಿಗಳು, ಹೊಸನಗರ ತಾಲ್ಲೂಕು ಒಕ್ಕಲಿಗರ ಸಂಘ (ನೋಂ) ರಿಪ್ಪನ್‌ಪೇಟೆ, ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರಿಗೆ ರೂ. 10.00 ಲಕ್ಷ (ರೂಪಾಯಿ ಹತ್ತು ಲಕ್ಷ ಮಾತ್ರ) ಗಳನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–102–4–03–100 (ಯೋಜನೆ) ಜಿಲ್ಲಾರಂಗಮಂದಿರಗಳಿಗೆ ಧನಸಹಾಯ ಧ್ವನಿ, ಬೆಳಕು ಜನರೇಟರ್ ಇತ್ಯಾದಿ ಪರಿಕರಗಳಿಗೆ ಒದಗಿಸಲಾದ ಅನುದಾನದಲ್ಲಿ ಭರಿಸಬಹುದೆಂದು ತಿಳಿಸಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಈ ಕೆಳಕಂಡಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 61 ಸ್ಮಾಪ್ರನಿ 2009, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶಿವಮೊಗ್ಗ ಜಿಲ್ಲೆ ಹೊಸನಗರ ತಾಲ್ಲೂಕು ರಿಪ್ಪನ್‌ಪೇಟೆಯಲ್ಲಿ ಸಮುದಾಯ ಭವನ ನಿರ್ಮಾಣಕ್ಕೆ ರೂ. 10.00 ಲಕ್ಷ (ಹತ್ತು ಲಕ್ಷ ರೂ.ಗಳು ಮಾತ್ರ) ಗಳನ್ನು ಕಾರ್ಯದರ್ಶಿಗಳು ಹೊಸನಗರ ತಾಲ್ಲೂಕು ಒಕ್ಕಲಿಗರ ಸಂಘ(ನೋಂ) ರಿಪ್ಪನ್‌ಪೇಟೆ, ಹೊಸನಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಇವರಿಗೆ ಈ ಕೆಳಕಂಡ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

**ಷರತ್ತುಗಳು :**

1. ಕಾಮಗಾರಿಯನ್ನು ಟೆಂಡರ್ ಕರೆದು ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ, ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ರಂತೆ ಕ್ರಮ ಕೈಗೊಳ್ಳತಕ್ಕದ್ದು.
2. ಯಾವ ಉದ್ದೇಶಕ್ಕೆ ನೀಡಲಾಗಿದೆಯೋ ಅದೇ ಉದ್ದೇಶಕ್ಕೆ ಬಳಸಿಕೊಂಡು ಹಣಬಳಕೆಯ ಬಗ್ಗೆ ಪ್ರಮಾಣಪತ್ರ ಸಲ್ಲಿಸುವುದು.

ಈ ಮೊತ್ತವನ್ನು 2009-10 ನೇ ಸಾಲಿನ ಲೆಕ್ಕಶೀರ್ಷಿಕೆ 2205-00-102-4-03-100 (ಯೋಜನೆ) ರಡಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ದಿನಾಂಕ 01-01-2010 ರ ಟಿಪ್ಪಣಿ ಸಂಖ್ಯೆ : ಆಇ 1248 ವೆಚ್ಚ-7 2009ರಲ್ಲಿ ಸಹಮತಿಯನ್ನು ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 345

**(ಎಂ. ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಗ್ರೀನ್-ಲಾ ಗಾಲಿಂಗ್ಸ್ ಪುಸ್ತಕವನ್ನು ಆಂಗ್ಲ ಆವೃತ್ತಿಯಲ್ಲಿ ಮುದ್ರಣ ಮಾಡುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ : ಡಿಎಎಂ : ಪ್ರ.ವಿ. : ಮೈಸೂರು 2009-10, ದಿನಾಂಕ 16-12-2009.

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ 16-12-2009ರ ಪತ್ರದಲ್ಲಿ, ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು 2009-10ನೇ ಸಾಲಿನ ಮುಂದುವರೆದ ಯೋಜನಾ ಕಾರ್ಯಕ್ರಮದಡಿ ಸಂಶೋಧನಾ ಪ್ರಕಟಣೆಗಳಿಗಾಗಿ ರೂ. 20.00 ಲಕ್ಷಗಳನ್ನು ನಿಗದಿಗೊಳಿಸಿಕೊಂಡಿದ್ದು ಇದರಡಿ ಗ್ರೀನ್-ಲಾ ಗಾಲಿಂಗ್ಸ್ ಪುಸ್ತಕದ ಮರು ಮುದ್ರಣದ ಕಾರ್ಯಕ್ರಮವು ಒಳಗೊಂಡಿದ್ದು ಅದನ್ನು ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 74 ಸ್ವೀಮರ 2009, ದಿನಾಂಕ 11-05-2009 ರಲ್ಲಿ ಅನುಮೋದನೆ ನೀಡಿದ್ದು. ಈ ಪುಸ್ತಕದ ಮರು ಮುದ್ರಣಕ್ಕಾಗಿ ಪಾರದರ್ಶಕ ನಿಯಮಾನುಸಾರ ಟೆಂಡರ್ ಪ್ರಕ್ರಿಯೆಯನ್ನು ಕೈಗೊಂಡು ಅತ್ಯಂತ ಕಡಿಮೆ ದರ ಸೂಚಿಸಿರುವ ಮುದ್ರಣಕಾರರೊಂದಿಗೆ ಕರಾರು ಒಪ್ಪಂದ ಮಾಡಿಕೊಂಡು ಕಛೇರಿ ಆದೇಶ ಹೊರಡಿಸಲಾಗಿದೆ ಎಂದು ತಿಳಿಸಿರುತ್ತಾರೆ.

ಲೆಕ್ಕಶೀರ್ಷಿಕೆ 2205-00-103-0-01 (ಯೋಜನೆ) 059 – ಇತರೆ ಖರ್ಚುಗಳ ಅಡಿಯಲ್ಲಿ ಸಂಶೋಧನಾ ಪ್ರಕಟಣೆಗಳಿಗಾಗಿ ನಿಗದಿಪಡಿಸಿರುವ ರೂ. 20.00 ಲಕ್ಷಗಳಲ್ಲಿ ರೂ. 6.49 ಲಕ್ಷಗಳನ್ನು ಗ್ರೀನ್-ಲಾ ಗಾಲಿಂಗ್ಸ್ ಪುಸ್ತಕದ ಮರು ಮುದ್ರಣದ ಒಟ್ಟು 2000 ಪುಸ್ತಕಗಳ ಮುದ್ರಣಕ್ಕಾಗಿ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 7 ಕೆಎಂಯು 2010, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಗ್ರೀನ್-ಲಾ ಗಾಲಿಂಗ್ಸ್ ಪುಸ್ತಕವನ್ನು ಆಂಗ್ಲ, ಆವೃತ್ತಿಯಲ್ಲಿ ಮುದ್ರಣ ಮಾಡಲು ರೂ. 6,49,000/- (ರೂಪಾಯಿ ಆರು ಲಕ್ಷ ನಲವತ್ತೊಂಬತ್ತು ಸಾವಿರ ಮಾತ್ರ) ಗಳನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರಿಗೆ ಬಿಡುಗಡೆ ಮಾಡಿದೆ.

**ಷರತ್ತುಗಳು :**

1. ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಕಾಯ್ದೆ 1999 ಹಾಗೂ ಅದರ ನಿಯಮಗಳು 2000ನ್ನು ಅನುಸರಿಸುವುದು.
2. ಪ್ರಕಟಣೆ ಕಾರ್ಯ ಕೈಗೊಂಡು ಹಣ ಬಳಕೆ ಪ್ರಮಾಣ ಪತ್ರವನ್ನು ಒದಗಿಸುವುದು.

ಈ ವೆಚ್ಚವನ್ನು 2009–10ನೇ ಸಾಲಿನ ಲೆಕ್ಕಶೀರ್ಷಿಕೆ 2205–00–103–0–01–059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ದಿನಾಂಕ 13–01–2010ರ ಟಿಪ್ಪಣಿ ಸಂಖ್ಯೆ : ಶಿಇ 75 ಐಎಫ್ (ಬಿ&ಎ) 2010 ರಲ್ಲಿ ಸಹಮತಿ ಪಡೆದು ಮತ್ತು ಆರ್ಥಿಕ ಇಲಾಖೆಯ ಆದೇಶ ಸಂ:ಎಫ್.ಡಿ. 1 ಟಿ.ಎಫ್.ಪಿ. 96 ದಿನಾಂಕ : 10–07–96ರಲ್ಲಿ, ಸರ್ಕಾರದ ಕಾರ್ಯದರ್ಶಿಯವರಿಗೆ ನೀಡಿರುವ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 346

**(ಎಂ. ಕೆ. ಧರ್ಮರಾಜಪ್ಪ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

(ಆಡಳಿತ ಕನ್ನಡ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಡಾ॥ ಸಿ.ಎಂ. ಸಿದ್ಧಲಿಂಗಪ್ಪ, ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅನಗೋಳ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ ಇವರ ರಾಜೀನಾಮೆಯನ್ನು ಅಂಗೀಕರಿಸುವ ಬಗ್ಗೆ.

**ಓದಲಾಗಿದೆ:** ಆಯುಕ್ತರು, ಆಕುಕ ಸೇವೆಗಳು, ಬೆಂಗಳೂರು, ಇವರ ಪತ್ರ ಸಂಖ್ಯೆ: ಜೆಆರ್ಒ (2)/327/2006–07 ದಿನಾಂಕ 11.03.2009 ಮತ್ತು 15.07.2009.

**ಪ್ರಸ್ತಾವನೆ :**

ಆಯುಕ್ತರು, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು. ಇವರು ಮೇಲೆ ಓದಲಾದ ಪತ್ರದಲ್ಲಿ, ಡಾ॥ ಸಿ.ಎಂ. ಸಿದ್ಧಲಿಂಗಪ್ಪ, ಇವರು ದಿನಾಂಕ 08.01.2007 ರಿಂದ ಒಪ್ಪಿಕೊಳ್ಳುವಂತೆ ಕೋರಿ ರಾಜೀನಾಮೆಯನ್ನು ಸಲ್ಲಿಸಿದ್ದು, ಇವರ ವಿರುದ್ಧ ಇಲಾಖಾ ವಿಚಾರಣೆ ಇರುವುದಿಲ್ಲ ಹಾಗೂ ಬಾಂಡ್ ಅವಧಿಯಲ್ಲಿ ಇರುವುದಿಲ್ಲವೆಂದು ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿ, ಮಂಡ್ಯ ಹಾಗೂ ಹಾಸನ ಇವರುಗಳು ತಿಳಿಸಿರುವುದರಿಂದ ದಿನಾಂಕ 08.01.2007 ರಿಂದ ಜಾರಿಗೆ ಬರುವಂತೆ ವೈದ್ಯರ ರಾಜೀನಾಮೆಯನ್ನು ಅಂಗೀಕರಿಸಲು ಕೋರಿರುತ್ತಾರೆ.

ಆಯುಕ್ತರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 118 ಹೆಚ್ಎಸ್ಹೆಚ್ 2009 ಬೆಂಗಳೂರು, ದಿನಾಂಕ: 30.01.2010.**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ, ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 252(ಎ) ರನ್ವಯ ಡಾ॥ ಸಿ.ಎಂ. ಸಿದ್ಧಲಿಂಗಪ್ಪ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಪ್ರಾಥಮಿಕ ಆರೋಗ್ಯ ಕೇಂದ್ರ, ಅನಗೋಳ, ಕೆ.ಆರ್.ಪೇಟೆ ತಾಲ್ಲೂಕು, ಮಂಡ್ಯ ಜಿಲ್ಲೆ ಇವರು ನೀಡಿರುವ ರಾಜೀನಾಮೆಯನ್ನು ದಿನಾಂಕ 08.01.2007 ರಿಂದ ಪೂರ್ವಾನ್ವಯವಾಗಿ ಜಾರಿಗೆ ಬರುವಂತೆ ಅಂಗೀಕರಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 347

**(ಐ. ಹೇಮನಾಥ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

(ಸೇವೆಗಳು–1)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಸರ್ಕಾರಿ ಸ್ವಾಯತ್ತ ಸಂಸ್ಥೆಗಳಾದ ವೈದ್ಯಕೀಯ ವಿಜ್ಞಾನ ಸಂಸ್ಥೆಗಳಿಗೆ ಹೊಂದಿಕೊಂಡಿರುವ ಬೋಧನಾ ಆಸ್ಪತ್ರೆಗಳಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ಅಧಿಕಾರಿಗಳನ್ನು ಆಯಾ ಸಂಸ್ಥೆಗಳ ಸೇವೆಯಲ್ಲಿ ವಿಲೀನಗೊಳಿಸುವ ಬಗ್ಗೆ.

**ಪ್ರಸ್ತಾವನೆ :**

ಬೆಂಗಳೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಮೈಸೂರು ವೈದ್ಯಕೀಯ ಕಾಲೇಜು ಮತ್ತು ಸಂಶೋಧನಾ ಸಂಸ್ಥೆ, ಬೀದರ್ ಮತ್ತು ಶಿವಮೊಗ್ಗ ವೈದ್ಯಕೀಯ ವಿಜ್ಞಾನ ಸಂಸ್ಥೆಗಳು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ, 1960ರಡಿ ನೋಂದಾಯಿತ ಸ್ವಾಯತ್ತ ಸಂಸ್ಥೆಗಳಾಗಿರುತ್ತವೆ. ಆಯಾ ಜಿಲ್ಲಾ ಕೇಂದ್ರಗಳಲ್ಲಿದ್ದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಜಿಲ್ಲಾ ಆಸ್ಪತ್ರೆಗಳನ್ನು ಅವು ಹೊಂದಿದ್ದ, ಮೂಲಭೂತ ಸೌಕರ್ಯ, ಕಟ್ಟಡ ಉಪಕರಣ, ಸಿಬ್ಬಂದಿ ಮತ್ತು ಆಯವ್ಯಯದೊಂದಿಗೆ ವೈದ್ಯಕೀಯ ಶಿಕ್ಷಣ ಇಲಾಖೆಯ ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಶಿಸ್ತು ನಿಯಂತ್ರಣಕ್ಕೆ ತರಲಾಯಿತು. ಈ ಜಿಲ್ಲಾ ಆಸ್ಪತ್ರೆಗಳನ್ನು ಆಯಾ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ನಿರ್ದೇಶಕರು/ಡೀನ್/ಪ್ರಾಂಶುಪಾಲರ ಶೈಕ್ಷಣಿಕ, ಆಡಳಿತಾತ್ಮಕ ಮತ್ತು ಶಿಸ್ತು ನಿಯಂತ್ರಣದ ಬೋಧನಾ ಆಸ್ಪತ್ರೆಗಳೆಂದು ಕರೆಯಲಾಯಿತು. ಅವುಗಳಲ್ಲಿ ಕಾರ್ಯ ನಿರ್ವಹಿಸುತ್ತಿದ್ದ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ವೈದ್ಯರುಗಳು ಅವರು ಹೊಂದಿದ್ದ ಸ್ನಾತಕ/ಸ್ನಾತಕೋತ್ತರ ಪದವಿಗಳಿಗೆ ಅನುಸಾರವಾಗಿ ಆಯಾಯ ವಿಭಾಗಗಳಲ್ಲಿ ಬೋಧಕ ಸಿಬ್ಬಂದಿಯಾಗಿ ಭಾರತೀಯ ವೈದ್ಯಕೀಯ ಪರಿಷತ್ತಿಗೆ ವಾರ್ಷಿಕ ತಪಾಸಣೆಗಾಗಿ ತೋರಿಸಲಾಯಿತು. ಪ್ರಯುಕ್ತ ಇವರು ಬೋಧಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ, ಬೋಧಕ ಸಿಬ್ಬಂದಿಯ ಕೊರತೆಯನ್ನು ನೀಗಲು ಭಾರತೀಯ ವೈದ್ಯಕೀಯ ಪರಿಷತ್ತಿನ ನಿಯಂತ್ರಣಗಳ ಪ್ರಕಾರ ಬೋಧನಾ ಆಸ್ಪತ್ರೆಗಳಲ್ಲಿ ಬೋಧಕ ಸಿಬ್ಬಂದಿಯಾಗಿ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಯ ತಜ್ಞ ವೈದ್ಯರುಗಳನ್ನು ಆಯಾ ಸಂಸ್ಥೆಗಳ ಸೇವೆಯಲ್ಲಿ ವಿಲೀನಗೊಳಿಸಲು ಸರ್ಕಾರವು ತೀರ್ಮಾನಿಸಿ, ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 395 ಎಂಎಂಸಿ 2007, ಬೆಂಗಳೂರು, ದಿನಾಂಕ: 02.02.2010.**

ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಗೆ ಹೊಂದಿಕೊಂಡಿರುವ ಬೋಧನಾ ಆಸ್ಪತ್ರೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಈ ಕೆಳಗಿನ ದಂತ ವೈದ್ಯರ ಸೇವೆಯನ್ನು ಈ ಕೂಡಲೇ ಜಾರಿಗೆ ಬರುವಂತೆ ಅವರ ಎದುರಿಗೆ ನಮೂದಿಸಿರುವ ಸ್ವಾಯುತ್ತ ವೈದ್ಯಕೀಯ ವಿಜ್ಞಾನಗಳ ಸಂಸ್ಥೆಯ ಸೇವೆಯಲ್ಲಿ ಈ ಕೆಳಗಿನ ಷರತ್ತಿಗಳಿಗೊಳಪಟ್ಟು ವಿಲೀನಗೊಳಿಸಲಾಗಿದೆ.

| ಕ್ರ. ಸಂ. | ವೈದ್ಯರ ಹೆಸರು | ಪದನಾಮ | ವಿದ್ಯಾರ್ಹತೆ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ವಿಲೀನಗೊಳಿಸಿದ ಸಂಸ್ಥೆಯ ಹೆಸರು |
|---|---|---|---|---|---|---|
| 1. | ಡಾ॥ ರೋಸಮ್ಮ ಜಾರ್ಜ | ದಂತ ಆರೋಗ್ಯಾಧಿಕಾರಿ | ಬಿಡಿಎಸ್ | 16.2.1975 | 11.09.2000 | ಹಾಸನ ವೈದ್ಯಕೀಯ ವಿಜ್ಞಾನಗಳ ಸಂಸ್ಥೆ, ಹಾಸನ |

**ಷರತ್ತುಗಳು :**

(1) ದಂತ ವೈದ್ಯಾಧಿಕಾರಿಯು ಭಾರತೀಯ ವೈದ್ಯಕೀಯ ಪರಿಷತ್ತಿನ ಬೋಧಕ ಸಿಬ್ಬಂದಿಗೆ ವಿದ್ಯಾರ್ಹತೆ ನಿಯಂತ್ರಣಗಳ ಪ್ರಕಾರ, ನಿಗದಿತ ವಿದ್ಯಾರ್ಹತೆಯನ್ನು ಹೊಂದಿ ಅರ್ಹರಾಗಿರತಕ್ಕದ್ದು.

(2) ದಂತ ವೈದ್ಯಾಧಿಕಾರಿಯು ಪರಿವೀಕ್ಷಣಾ ಅವಧಿ/ಸ್ಥಾನಪನ್ನ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರತಕ್ಕದ್ದು.

(3) ಇವರ ವಿರುದ್ಧ ಇಲಾಖಾ ವಿಚಾರಣೆ/ಕ್ರಿಮಿನಲ್ ಮೊಕದ್ದಮೆ ಬಾಕಿ ಇರತಕ್ಕದ್ದಲ್ಲ.

(4) ದಂತ ವೈದ್ಯಾಧಿಕಾರಿಯು ಸ್ವಾಯುತ್ತ ಸಂಸ್ಥೆಗಳ ಸೇವೆಯಲ್ಲಿ ವಿಲೀನಗೊಂಡ ನಂತರ ಮುಂದೆ ಅವರು ರಾಜ್ಯ ಸಿವಿಲ್ ಸೇವೆಗಳಲ್ಲಿನ ಹುದ್ದೆಗಳಿಗೆ ವಾಪಸ್ ಬರಲು ಆಸ್ಪದ ಇರತಕ್ಕದ್ದಲ್ಲ.

(5) ಸರ್ಕಾರಿ ಇಲಾಖೆಯಿಂದ ಸ್ವಾಯತ್ತ ಸಂಸ್ಥೆಗೆ ವಿಲೀನಗೊಳ್ಳಲು ಸಂಬಂಧಿಸಿದ ನೌಕರರುಗಳು ಒಪ್ಪಿಗೆಯನ್ನು ಬರವಣಿಗೆ ಮೂಲಕ ಸಲ್ಲಿಸಿರತಕ್ಕದ್ದು.

(6) ಸದರಿ ನೌಕರರು ಸರ್ಕಾರದಲ್ಲಿ ಸಲ್ಲಿಸಿದ ಸೇವೆಗೆ ಸಂಬಂಧಿಸಿದಂತೆ ಪ್ರೋರೇಟಾ (Prorata) ಪಿಂಚಣಿ ಬಗ್ಗೆ ಆದೇಶವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವಾ ನಿಯಮಗಳು) ಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 524 ಸೇನಿಎ 2008, ದಿನಾಂಕ 22.12.2008ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 348

**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿಗಳು ಗುತ್ತಿಗೆ ಆಧಾರದಲ್ಲಿ ನೇಮಕಗೊಂಡು ಸಲ್ಲಿಸಿದ ಸೇವೆ, ಅದೇ ರೀತಿ ಈ ಹಿಂದೆ ಗ್ರಾಮೀಣ ಕೃಪಾಂಕದಡಿ ನೇಮಕಗೊಂಡು ಸಲ್ಲಿಸಿದ ಸೇವೆ ಹಾಗೂ ನಂತರ ಗುತ್ತಿಗೆ ಆಧಾರದ ಮೇಲೆ ಸಲ್ಲಿಸಿದ್ದ ಸೇವೆ ಇವೆರಡರ ನಡುವೆ ಸೇವಾ ವಿಚ್ಛಿನ್ನತೆ ಆಗಿರದಿದ್ದಲ್ಲಿ, ಸದರಿ ಸೇವಾ ಅವಧಿಯನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸುವಾಗ ಗಣನೆಗೆ ತೆಗೆದುಕೊಳ್ಳುವ ಬಗ್ಗೆ.

**ಓದಲಾಗಿದೆ :**
1) ದಿನಾಂಕ 13–11–2008 ರಂದು ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನ.
2) ಆರ್ಥಿಕ ಇಲಾಖೆಯ ಅ.ಟಿ. ಸಂಖ್ಯೆ : ಆಇ 1208 ಸೇ–1 09 ದಿನಾಂಕ 25.11.2009 ರಂದು ನೀಡಿರುವ ಅಭಿಪ್ರಾಯ.
3) ಕರ್ನಾಟಕ ರಾಜ್ಯ ವೈದ್ಯಾಧಿಕಾರಿಗಳ ಸಂಘ, ಬೆಂಗಳೂರು ಇವರ ಮನವಿ ದಿನಾಂಕ 14.12.2009.
4) ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಅಧ್ಯಕ್ಷತೆಯಲ್ಲಿ ದಿನಾಂಕ 17–12–2009 ರಂದು ನಡೆದ ಸಭೆಯ ನಡವಳಿಗಳು.
5) ವೈದ್ಯಾಧಿಕಾರಿಗಳ ಸಂಘದ ದಿನಾಂಕ 29–12–2009 ರ ಮನವಿ.

**ಪ್ರಸ್ತಾವನೆ :**

ಕರ್ನಾಟಕ ವೈದ್ಯಾಧಿಕಾರಿಗಳ ಸಂಘವು ಅನೇಕ ಬೇಡಿಕೆಗಳನ್ನು ಈಡೇರಿಸುವಂತೆ ಕೋರಿ 2008 ರಲ್ಲಿ ಮುಷ್ಕರ ನಡೆಸಿತ್ತು. ವೈದ್ಯಾಧಿಕಾರಿಗಳು ಸಲ್ಲಿಸಿದ್ದ ಬೇಡಿಕೆಗಳ ಪೈಕಿ, ವೈದ್ಯರು ಗುತ್ತಿಗೆ ಆಧಾರದ ಮೇಲೆ ಸಲ್ಲಿಸಿದ ಅವಧಿಯನ್ನು ಸ್ನಾತಕೋತ್ತರ ಪದವಿ ಪರೀಕ್ಷೆಗೆ ಪರಿಗಣಿಸಬೇಕೆಂಬುದು ಸಹ ಒಂದಾಗಿತ್ತು. ದಿನಾಂಕ 13–11–2008 ರಂದು ಮಾನ್ಯ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವರ ಅಧ್ಯಕ್ಷತೆಯಲ್ಲಿ ನಡೆದ ಸಭೆಯಲ್ಲಿ ತೆಗೆದುಕೊಂಡ ತೀರ್ಮಾನದಲ್ಲಿ ವೈದ್ಯರು ಗುತ್ತಿಗೆ ಆಧಾರದ ಮೇಲೆ ಸಲ್ಲಿಸಿದ ಅವಧಿಯನ್ನು ಸ್ವಾತಕೋತ್ತರ ಪದವಿ ಪರೀಕ್ಷೆಗೆ ಪರಿಗಣಿಸಲು ಒಪ್ಪಲಾಗಿತ್ತು. ಅದರನ್ವಯ, ಪ್ರಸ್ತಾವನೆಯನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಹಾಗೂ ಆರ್ಥಿಕ ಇಲಾಖೆಯೊಡನೆ ಸಮಾಲೋಚಿಸಿ ಪರಿಶೀಲಿಸಲಾಗಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆಯು ಪ್ರಸ್ತಾವನೆಗೆ ಸಹಮತಿಸಲಿಲ್ಲ. ಆರ್ಥಿಕ ಇಲಾಖೆಯು ಮೇಲೆ ಓದಲಾದ (2) ರ ಅನಧಿಕೃತ ಟಿಪ್ಪಣಿಯಲ್ಲಿ ಸ್ನಾತಕೋತ್ತರ ಪದವಿಗೆ ಅರ್ಹ ಸೇವಾನಿರತ ವೈದ್ಯರನ್ನು ಆಯ್ಕೆ ಮಾಡುವ ಸಂದರ್ಭದಲ್ಲಿ ಸಕ್ರಮವಾಗಿ ಸೇವೆ ಸಲ್ಲಿಸಿದ ವೈದ್ಯರು ಲಭ್ಯವಿಲ್ಲದಿದ್ದಲ್ಲಿ ಸೇವಾನಿರತ ವೈದ್ಯರ ಕೋಟಾವನ್ನು ಸಂಪೂರ್ಣವಾಗಿ ಬಳಸಿಕೊಳ್ಳುವ ಉದ್ದೇಶಕ್ಕಾಗಿ ಮಾತ್ರ ಗುತ್ತಿಗೆ ಆಧಾರದ ಸೇವೆಯನ್ನು ಪರಿಗಣಿಸುವುದು ಸೂಕ್ತವೆನಿಸುತ್ತದೆ ಎಂದೂ ಹಾಗೂ ಆಡಳಿತ ಇಲಾಖೆಯು ತನ್ನ ಆಯ್ಕೆ ನಿಯಮಗಳಲ್ಲಿ ಅದರಂತೆ ಸೂಕ್ತವಾದ ಉಪಬಂಧವನ್ನು ಕಲ್ಪಿಸುವ ಬಗ್ಗೆ ಪರಿಶೀಲಿಸಬಹುದು ಎಂದು ಅಭಿಪ್ರಾಯವನ್ನು ನೀಡಿತ್ತು.

ಮೇಲೆ ಓದಲಾದ (3) ರ ದಿನಾಂಕ 14–2–2009 ರ ಮನವಿಯಲ್ಲಿ ವೈದ್ಯಾಧಿಕಾರಿಗಳ ಸಂಘವು ಸದರಿ ಬೇಡಿಕೆಯನ್ನು ಪುನರುಚ್ಚರಿಸುತ್ತಾ, ವೈದ್ಯರು ಸಲ್ಲಿಸಿರುವ ಸಂಪೂರ್ಣ ಗುತ್ತಿಗೆ ಅವಧಿಯನ್ನು ಸೇವಾನಿರತ ಸ್ವಾತಕೋತ್ತರ ಅಡಿ ವ್ಯಾಸಂಗಕ್ಕೆ ನಿಯೋಜಿಸಲು ಪರಿಗಣಿಸುವಂತೆ ಕೋರಿದೆ. ಈ ಬೇಡಿಕೆಯನ್ನು ಒಳಗೊಂಡಂತೆ, ಇನ್ನಿತರ ಬೇಡಿಕೆಗಳ ಬಗ್ಗೆ ಚರ್ಚಿಸಲು ಸರ್ಕಾರದ ಮುಖ್ಯ ಕಾರ್ಯದರ್ಶಿರವರ ಅಧ್ಯಕ್ಷತೆಯಲ್ಲಿ ದಿನಾಂಕ 17.12.2009 ರಂದು ಸಭೆ ನಡೆಯಿತು. ಸದರಿ ಸಭೆಯಲ್ಲಿ ಆರ್ಥಿಕ ಇಲಾಖೆಯ ಹಿರಿಯ ಅಧಿಕಾರಿಗಳು ಒಳಗೊಂಡಂತೆ ಇತರ ಅಧಿಕಾರಿಗಳು ಉಪಸ್ಥಿತರಿದ್ದರು. ಈ ಸಭೆಯಲ್ಲಿ ಚರ್ಚಿಸಲಾಗಿ, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ವೃಂದದಲ್ಲಿ 1562 ವೈದ್ಯಾಧಿಕಾರಿಗಳು ಪ್ರಸ್ತುತ ಕರ್ತವ್ಯ ನಿರ್ವಹಿಸುತ್ತಿದ್ದಾರೆ. ಇವರ ಪೈಕಿ ಸುಮಾರು 1000 ಕ್ಕಿಂತ ಹೆಚ್ಚು ವೈದ್ಯಾಧಿಕಾರಿಗಳು ಗುತ್ತಿಗೆ ಆಧಾರದ ಮೇಲೆ ಕಾರ್ಯ

ನಿರ್ವಹಿಸಿ ಸರ್ಕಾರಿ ಸೇವೆಯಲ್ಲಿ ಸಕ್ರಮಗೊಂಡವರಾಗಿರುತ್ತಾರೆ. ಉಳಿದವರು ನೇರ ನೇಮಕಾತಿ ಮುಖಾಂತರ ಆಯ್ಕೆಗೊಂಡು ನೇಮಕಾತಿ ಹೊಂದಿದವರು ಆಗಿರುತ್ತಾರೆ. ಇದರಿಂದ ಹೆಚ್ಚಿನ ವೈದ್ಯಾಧಿಕಾರಿಗಳು ಗುತ್ತಿಗೆ ಆಧಾರದ ಮೇಲೆ ಕಾರ್ಯ ನಿರ್ವಹಿಸಿ ಸಕ್ರಮಗೊಂಡವರಾಗಿರುತ್ತಾರೆ. ಆದ್ದರಿಂದ ಆರ್ಥಿಕ ಇಲಾಖೆಯು ದಿನಾಂಕ 25-11-2009 ರಂದು ಮೇಲೆ ಓದಲಾದ (2) ರಲ್ಲಿ ನೀಡಿರುವ ಅಭಿಪ್ರಾಯವನ್ನು "ವೈದ್ಯಾಧಿಕಾರಿಗಳು ಗುತ್ತಿಗೆ ಆಧಾರದ ಮೇಲೆ ಈ ಹಿಂದೆ ಸಲ್ಲಿಸಿದ ಸೇವೆಯನ್ನು ಸೇವಾನಿರತ ಸ್ನಾತಕೋತರ ವ್ಯಾಸಂಗಕ್ಕೆ ನಿಯೋಜಿಸಲು ಮಾತ್ರ ಪರಿಗಣಿಸಬಹುದು ಹಾಗೂ, ಉಳಿದ ಯಾವುದೇ ಸೇವಾ ವಿಷಯಕ್ಕೆ ಅದನ್ನು ಪರಿಗಣಿಸಬಾರದು" ಎಂದು ಬದಲಾಯಿಸಿ ವೈದ್ಯರು ಗುತ್ತಿಗೆ ಅವಧಿಯಲ್ಲಿ ಸಲ್ಲಿಸಿದ್ದ ಸೇವೆಯನ್ನು ಸೇವಾನಿರತ ಕೋಟಾದ ಅಡಿಯಲ್ಲಿ ಸ್ವಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಪರಿಗಣಿಸಬಹುದೆಂದು ನಿರ್ಣಯ ತೆಗೆದುಕೊಳ್ಳಲಾಯಿತು. ಈ ಬಗ್ಗೆ ಮತ್ತೊಮ್ಮೆ ಕಡತವನ್ನು ಆರ್ಥಿಕ ಇಲಾಖೆಯ ಅಭಿಪ್ರಾಯಕ್ಕೆ ಕಳುಹಿಸದೆ, ಮೇಲೆ ಓದಲಾದ (4) ರ ಸಭೆಯ ನಡವಳಿಗಳ ಆಧಾರದ ಮೇಲೆ ಈ ಬಗ್ಗೆ ಸೂಕ್ತ ಆದೇಶ ಹೊರಡಿಸಲು ಆರ್ಥಿಕ ಇಲಾಖೆ ಸಭೆಯಲ್ಲಿ ಒಪ್ಪಿಗೆ ನೀಡಿದೆ.

ಮೇಲೆ (4) ರಲ್ಲಿ ಓದಲಾದ ಮನವಿಯಲ್ಲಿ ಕರ್ನಾಟಕ ವೈದ್ಯಾಧಿಕಾರಿಗಳ ಸಂಘವು ಸುಮಾರು 188 ವೈದ್ಯಾಧಿಕಾರಿಗಳು ಗ್ರಾಮೀಣ ಕೃಪಾಂಕದಡಿಯಲ್ಲಿ ಆಯ್ಕೆಯಾಗಿ ಸುಮಾರು ನಾಲ್ಕವರೆ ವರ್ಷಗಳ ಕರ್ತವ್ಯ ನಿರ್ವಹಿಸಿದ್ದು, ಸರ್ವೋಚ್ಚ ನ್ಯಾಯಾಲಯದ ಆದೇಶದಂತೆ ದಿನಾಂಕ 31-12-2003 ರಂದು ಸೇವೆಯಿಂದ ಬಿಡುಗಡೆಯಾಗಿ ತಕ್ಷಣ ಅಂದರೆ ದಿನಾಂಕ 1-1-2004 ರಿಂದ ಗುತ್ತಿಗೆ ಆಧಾರದಲ್ಲಿ ಸರ್ಕಾರಿ ಆದೇಶದಂತೆ ದಿನಾಂಕ 14-7-2005 ರವರೆಗೆ ಸುಮಾರು 1 ವರ್ಷ 7 ತಿಂಗಳು ಸೇವೆ ಸಲ್ಲಿಸಿ, ತದನಂತರ ದಿನಾಂಕ 17-7-2005 ರ ಸರ್ಕಾರಿ ಆದೇಶದಂತೆ ವಿಶೇಷ ನೇರ ನೇಮಕಾತಿಯನ್ವಯ ಖಾಯಂ ಸೇವೆಯಲ್ಲಿ ಪುನರ್ ಆಯ್ಕೆಗೊಂಡು ಈ ಹಿಂದೆ ಗ್ರಾಮೀಣ ಪ್ರದೇಶದಲ್ಲಿ ಸೇವೆ ಸಲ್ಲಿಸಿದ ಎಲ್ಲಾ ಸೇವೆಯನ್ನು ಸ್ನಾತಕೋತ್ತರ ಪದವಿ ಪರೀಕ್ಷೆಗೆ ನಿಯೋಜಿಸಲು ಪರಿಗಣಿಸುವಂತೆ ಕೋರಿದ್ದಾರೆ. ಸಂಘದ ಮೇಲ್ಕಂಡ ಮನವಿಯನ್ನು ಪರಿಶೀಲಿಸಲಾಗಿ ಈ ಹಿಂದೆ 2000 ರಲ್ಲಿ ವಿಶೇಷ ಆಯ್ಕೆ ಸಮಿತಿಯ ಮುಖಾಂತರ 568 ಅಭ್ಯರ್ಥಿಗಳನ್ನು ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ ಹುದ್ದೆಗೆ ಮತ್ತು 113 ಅಭ್ಯರ್ಥಿಗಳನ್ನು ದಂತ ಆರೋಗ್ಯಾಧಿಕಾರಿ ಹುದ್ದೆಗೆ ಆಯ್ಕೆ ಮಾಡಿದ್ದರಿಂದ ಅವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ ಆಕುಕ 716 ಹೆಚ್‌ಎಸ್‌ಹೆಚ್ 1999 ದಿನಾಂಕ 23-6-2000 ದಲ್ಲಿ ನೇಮಕಾತಿಯನ್ನು ಮಾಡಲಾಗಿತ್ತು. ಇವರುಗಳಲ್ಲಿ 184 ಅಭ್ಯರ್ಥಿಗಳು ಗ್ರಾಮೀಣ ಕೃಪಾಂಕದಡಿಯಲ್ಲಿ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಯಾಗಿ ಮತ್ತು 39 ದಂತ ಆರೋಗ್ಯಾಧಿಕಾರಿ ಹುದ್ದೆಗೆ ಆಯ್ಕೆಗೊಂಡು ನೇಮಕಾತಿ ಹೊಂದಿದ್ದರು. ನಂತರ ಮಾನ್ಯ ಸರ್ವೋಚ್ಚ ನ್ಯಾಯಾಲಯವು ನೀಡಿದ ತೀರ್ಪಿನ ಹಿನ್ನೆಲೆಯಲ್ಲಿ ಗ್ರಾಮೀಣ ಕೃಪಾಂಕ ರಹಿತವಾಗಿ ಆಯ್ಕೆ ಪಟ್ಟಿಯನ್ನು ಪರಿಷ್ಕರಿಸಿ, ಈ ಗ್ರಾಮೀಣ ಕೃಪಾಂಕದ ಸೌಲಭ್ಯದೊಡನೆ ನೇಮಕಗೊಂಡವರನ್ನು ಸೇವೆಯಿಂದ ವಿಮೋಚನೆಗೊಳಿಸಲು ಸಿ.ಆ.ಸು. ಇಲಾಖೆಯು ಸುತ್ತೋಲೆ ಹೊರಡಿಸಿತು. ಅದರಂತೆ, ಈ ವೈದ್ಯಾಧಿಕಾರಿಗಳ ಆಯ್ಕೆ ಪಟ್ಟಿಯನ್ನು ಪರಿಷ್ಕರಿಸಿ, ಗ್ರಾಮೀಣ ಕೃಪಾಂಕ ರಹಿತವಾಗಿ ಪರಿಷ್ಕೃತ ಆಯ್ಕೆ ಪಟ್ಟಿಯನ್ನು ತಯಾರಿಸಿದಾಗ 184 ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು ಮತ್ತು 39 ದಂತ ಆರೋಗ್ಯಾಧಿಕಾರಿಗಳು ಸ್ಥಾನ ಪಡೆಯದೇ ಇದ್ದುದರಿಂದ ಇವರುಗಳನ್ನು ದಿನಾಂಕ 20-12-2003 ರಂದು ಸರ್ಕಾರಿ ಸೇವೆಯಿಂದ ವಿಮೋಚನೆಗೊಳಿಸಲ್ಪಟ್ಟ ವೈದ್ಯಾಧಿಕಾರಿ ಮತ್ತು ದಂತ ಆರೋಗ್ಯಾಧಿಕಾರಿಗಳನ್ನು ಅವರುಗಳು ಈ ಹಿಂದೆ ಕರ್ತವ್ಯ ನಿರ್ವಹಿಸುತ್ತಿದ್ದ ಸ್ಥಳಗಳಲ್ಲಿಯೇ ಸರ್ವೋಚ್ಚ ನ್ಯಾಯಾಲಯದ ಅಂತಿಮ ತೀರ್ಪಿಗೆ ಒಳಪಟ್ಟು ಗುತ್ತಿಗೆ ಆಧಾರದ ಮೇಲೆ ದಿನಾಂಕ 30-12-2003 ರ ಆದೇಶದಲ್ಲಿ ನೇಮಕ ಮಾಡಲಾಯಿತು. ತದನಂತರ, ಕರ್ನಾಟಕ ನಾಗರೀಕ ಸೇವಾ ನಿಯಮ (ಗ್ರಾಮೀಣ ಕೃಪಾಂಕದ ಸೌಲಭ್ಯದೊಂದಿಗೆ ನೇಮಕಾತಿ ಹೊಂದಿದ ನೌಕರರ ವಿಲೀನಾತಿ) (ವಿಶೇಷ) ನಿಯಮಗಳು 2003 ರನ್ವಯ ಈ ವೈದ್ಯಾಧಿಕಾರಿ/ದಂತ ಆರೋಗ್ಯಾಧಿಕಾರಿಗಳನ್ನು ದಿನಾಂಕ 14-7-2005 ರ ಸರ್ಕಾರಿ ಆದೇಶದಲ್ಲಿ ನೇಮಕಾತಿ ಮಾಡಿಕೊಳ್ಳಲಾಯಿತು. ಈ ವಿಶೇಷ ನೇಮಕಾತಿ ಅಡಿಯಲ್ಲಿ ವಿಧಿಸಿರುವ ಷರತ್ತಿನ ಪ್ರಕಾರ, ವೈದ್ಯರುಗಳಿಗೆ ಹಿಂದಿನ ಗ್ರಾಮೀಣ ಕೃಪಾಂಕದಡಿಯಲ್ಲಿ ಸಲ್ಲಿಸಿದ್ದ ಸೇವೆಯನ್ನು ಯಾವುದೇ ಉದ್ದೇಶಕ್ಕೂ ಗಣನೆಗೆ ತೆಗೆದುಕೊಳ್ಳಲು ಅವಕಾಶವಿಲ್ಲ. ಅಂದರೆ, ವಿಲೀನಾತಿ ಆದೇಶದ ಅನ್ವಯ ಅವರುಗಳ ಸೇವೆಯು ಸಕ್ರಮಗೊಂಡ ದಿನಾಂಕದಿಂದ ಮಾತ್ರ ಪರಿಗಣಿಸಲು ಅವಕಾಶವಿದೆ.

ಗ್ರಾಮೀಣ ಕೃಪಾಂಕದಡಿ ನೇಮಕಗೊಂಡು ಸೇವೆ ಸಲ್ಲಿಸಿದ್ದ ವೈದ್ಯಾಧಿಕಾರಿಗಳು/ದಂತ ವೈದ್ಯಾಧಿಕಾರಿಗಳು ತದನಂತರ ಗುತ್ತಿಗೆ ಆಧಾರದ ಮೇಲೆ ಮುಂದುವರೆದಿದ್ದು, ಗ್ರಾಮೀಣ ಕೃಪಾಂಕದಡಿ ಸಲ್ಲಿಸಿದ್ದ ಸೇವೆ ಹಾಗೂ ನಂತರ ಗುತ್ತಿಗೆ ಆಧಾರದ ಮೇಲೆ ಸಲ್ಲಿಸಿದ್ದ ಸೇವೆ ಇವೆರಡರ ನಡುವೆ ಯಾವುದೇ ಸೇವಾ ವಿಚ್ಛಿನ್ನತೆ (No break in service) ಆಗಿಲ್ಲದೆ ಇರುವ ಷರತ್ತಿಗೆ ಒಳಪಟ್ಟು ಸದರಿ ಗ್ರಾಮೀಣ ಕೃಪಾಂಕ ಸೇವೆಯನ್ನು ಸಹ ಸ್ನಾತಕೋತ್ತರ ವ್ಯಾಸಂಗಕ್ಕೆ ಸೇವಾ ನಿರತ ಕೋಟಾದ ಅಡಿಯಲ್ಲಿ ನಿಯೋಜಿಸುವಾಗ ಪರಿಗಣನೆಗೆ ತೆಗೆದುಕೊಳ್ಳಬೇಕೆಂದು ತೀರ್ಮಾನಿಸಲಾಗಿದೆ.

ಮೇಲ್ಕಂಡ ಹಿನ್ನೆಲೆಯಲ್ಲಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 342 ಹೆಚ್ಎಸ್ಹೆಚ್ 2008, ಬೆಂಗಳೂರು, ದಿನಾಂಕ: 29.01.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಪ್ರಸ್ತುತ ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿಗಳು/ದಂತ ವೈದ್ಯಾಧಿಕಾರಿಗಳಾಗಿ ಕರ್ತವ್ಯ ನಿರ್ವಹಿಸುತ್ತಿರುವವರು ಈ ಹಿಂದೆ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡು ಸಲ್ಲಿಸಿದ್ದ ಗುತ್ತಿಗೆ ಸೇವಾ ಅವಧಿಯನ್ನು ಸೇವಾನಿರತ ಸ್ನಾತಕೋತ್ತರ ವ್ಯಾಸಂಗಕ್ಕೆ ನಿಯೋಜಿಸಲು ಮಾತ್ರ ಗಣನೆಗೆ ತೆಗೆದುಕೊಳ್ಳಲು ಈ ಮೂಲಕ ಆದೇಶಿಸಿದೆ. ಮುಂದುವರೆದು, ಕೆಲವು ವೈದ್ಯಾಧಿಕಾರಿಗಳು ಗ್ರಾಮೀಣ ಕೃಪಾಂಕದ ಅಡಿ ನೇಮಕಗೊಂಡು ತದನಂತರ ಗುತ್ತಿಗೆ ಆಧಾರದ ಮೇಲೆ ಮುಂದುವರೆದಿದ್ದು, ಈ ಎರಡು ಸೇವೆಗಳ ನಡುವೆ ಯಾವುದೇ ಸೇವಾ ವಿಚ್ಛಿನ್ನತೆ (No break in service) ಆಗಿಲ್ಲದೆ ಇರುವುದನ್ನು ದೃಢೀಕರಿಸಿಕೊಳ್ಳುವ ಷರತ್ತಿಗೆ ಒಳಪಟ್ಟು ಗ್ರಾಮೀಣ ಕೃಪಾಂಕದ ಸೇವೆ ಹಾಗೂ ಗುತ್ತಿಗೆ ಸೇವಾವಧಿಯನ್ನು ಸ್ನಾತಕೋತ್ತರ ವ್ಯಾಸಂಗಕ್ಕೆ ಸೇವಾನಿರತ ಕೋಟಾದಡಿ ನಿಯೋಜಿಸುವಾಗ ಪರಿಗಣನೆಗೆ ತೆಗೆದುಕೊಳ್ಳಲು ಸಹ ಈ ಮೂಲಕ ಆದೇಶಿಸಿದೆ. ಈ ಗುತ್ತಿಗೆ ಆಧಾರದ ಸೇವೆ ಹಾಗೂ ಗ್ರಾಮೀಣ ಕೃಪಾಂಕದಡಿ ಸಲ್ಲಿಸಿದ ಸೇವೆಯನ್ನು ಉಳಿದ ಯಾವುದೇ ಸೇವಾ ವಿಷಯಕ್ಕೂ ಪರಿಗಣಿಸಲು ಅವಕಾಶವಿಲ್ಲವೆಂದು ಆದೇಶಿಸಿದೆ

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 349

**(ಐ. ಹೇಮನಾಥ್)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಸೇವೆಗಳು–1)

## ಇಂಧನ ಸಚಿವಾಲಯ

**ವಿಷಯ :** M/s. Ravikiran Power Projects (P) Ltd. ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ ಕೆಆರ್ಇಡಿಎಲ್/06/ಉಪ್ಪುಗಲ ಹೊಳೆ ಎಂಹೆಚ್ಎಸ್/2009/1000 ದಿನಾಂಕ 25/26.2.2009.

2. ದಿನಾಂಕ 23.10.2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s. Ravikiran Power Projects (P) Ltd. ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಮುಂಡಕಾಜೆ ಗ್ರಾಮದ ಬಳಿ ಉಪ್ಪುಗಲ ಹೊಳೆಗೆ ಅಡ್ಡಲಾಗಿ 5.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 23.10.2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s. Ravikiran Power Projects (P) Ltd. ಇವರಿಗೆ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 175 ಎನ್ಸಿಇ 2009, ಬೆಂಗಳೂರು, ದಿನಾಂಕ: 01.02.2010.**

M/s. Ravikiran Power Projects (P) Ltd. ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಮುಂಡಕಾಜೆ ಗ್ರಾಮದ ಬಳಿ ಉಪ್ಪುಗಲ ಹೊಳೆಗೆ ಅಡ್ಡಲಾಗಿ 5.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude: 12º35'10" Longitude: 75º38'30" Power House-Latitude: 12º38'30" Longitude: 75º38'28") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಜಿ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. 350

## ಇಂಧನ ಸಚಿವಾಲಯ

**ವಿಷಯ :** M/s Guttaseema Wind Energy Company Private Limited ಇವರಿಗೆ 50.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ.

**ಓದಲಾಗಿದೆ :**
1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ ಕೆಆರ್‌ಇಡಿ/08/ಜಿಡಬ್ಲ್ಯುಇಸಿಪಿಎಲ್/2009/927 ದಿನಾಂಕ 18/21–2–2009 ಮತ್ತು ಸಂಖ್ಯೆ ಕೆಆರ್‌ಇಡಿ/08/ಜಿಡಬ್ಲ್ಯುಇಸಿಪಿಎಲ್/2009/2079 ದಿನಾಂಕ : 19–5–2009/2–7–2009.
2. ದಿನಾಂಕ : 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Guttaseema Wind Energy Company Private Limited ಇವರಿಗೆ ಧಾರವಾಡ ಮತ್ತು ಚಿತ್ರದುರ್ಗ ಜಿಲ್ಲೆಗಳಲ್ಲಿ ಒಟ್ಟು 125.5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Guttaseema Wind Energy Company Private Limited ಇವರಿಗೆ 50.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಧಾರವಾಡ ಜಿಲ್ಲೆಯಲ್ಲಿ ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರಿ ಆದೇಶ ಸಂಖ್ಯೆ: ಇಎನ್ 83 ಎನ್‌ಸಿಇ 2009, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, M/s Guttaseema Wind Energy Company Private Limited ಇವರಿಗೆ ಧಾರವಾಡ ಜಿಲ್ಲೆಯಲ್ಲಿ 50.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Topo sheet No. | Proposed capacity in MW | Near by villages of the proposed area and district | Geographical area description of the project |
|---|---|---|---|
| 48M/7 | 50.00 MW | Nalvadi, Chekalabi, Yerabuppi, Chikkanarti, Dharwad District<br>. | Proposed area is a ground level plain earmarked in N-S direction, situated on the South of Ingalahalli village. From the map it appears absolutely plain and it might be having agricultural activities. Further on the western side of the area Benihalla rever runs. The elevation of the area vary 600 to 611 mtrs. and the area is held in the following Geographical Co-ordinates:<br>Latitude : $15^0 15'^{0}$"-$15^0 23'52$"N<br>Longitude :$75^0 17'8$"-$75^0 21'37$"E<br>Ridge peaks: 603, 602, 612, 611, 618, 617 and 610m Amsl |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು.
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.

3. ಹಂಚಿಕೆದಾರರು ಪೂರ್ತಿ ಒಂದು ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗಸೂಚಿಗಳಿಗನುಗುಣವಾಗಿ ಮೈಕ್ರೊ ಸೈಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕತೆ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್‌ನಕ್ಷೆ ಮತ್ತು ವಿಂಡ್ ಫಾರ್ಮನ ಲೇಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.

4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸಿರುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬವನ್ನು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| > 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| >300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| >500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| >750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸುವ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ & ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆಗೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆಗೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

(ಎಸ್.ಜೆ. ಸಂಪತ್ ಕುಮಾರ್)

ಸರ್ಕಾರದ ಅಧೀನ ಕಾರ್ಯದರ್ಶಿ

ಪಿ.ಆರ್. 351 ಇಂಧನ ಇಲಾಖೆ

## ಇಂಧನ ಸಚಿವಾಲಯ

**ವಿಷಯ :** ಮೆ॥ ಮೂಡಬಾಗಿಲ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.6 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ :** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ:ಕೆಆರ್ಇಡಿ/06/ಮುಗಲ್‌ಖೋಡ್/ಎಂಹೆಚ್ಎಸ್/09/1102 ದಿನಾಂಕ: 28–2–2009/3–3–2009 ಮತ್ತು ಸಂಖ್ಯೆ: ಕೆಆರ್ಇಡಿ/06/ಮುಗಲ್‌ಖೋಡ್/20009/3016, ದಿನಾಂಕ : 11/14–09–2009.

**2.** ದಿನಾಂಕ : 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆಃ ಮೂಡಬಾಗಿಲ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ರಾಯಭಾಗ್ ತಾಲ್ಲೂಕಿನ ಮುಗಲ್‌ಖೋಡ್ ಗ್ರಾಮದ ಘಟಪ್ರಭಾ ಎಲ್.ಬಿ.ಸಿ.ಗೆ. ಅಡ್ಡಲಾಗಿ 2.6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ : 23–10–2009 ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆಃ ಮೂಡಬಾಗಿಲ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 2.6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 197 ಎನ್‌ಸಿಇ 2009, ಬೆಂಗಳೂರು, ದಿನಾಂಕ: 29–01.2010.**

ಮೆ॥ ಮೂಡಬಾಗಿಲ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಬೆಳಗಾಂ ಜಿಲ್ಲೆಯ ರಾಯಭಾಗ್ ತಾಲ್ಲೂಕಿನ ಮುಗಲ್‌ಖೋಡ್ ಗ್ರಾಮದ ಘಟಪ್ರಭಾ ಎಲ್.ಬಿ.ಸಿ.ಗೆ ಅಡ್ಡಲಾಗಿ 2.6 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude: 15º26'10" Longitude: 74º57'50" Power House-Latitude: 74º57'55" Longitude: 15º22'21") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1. (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ನೀರಾವರಿ/ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಜೆ. ಸಂಪತ್ ಕುಮಾರ್)**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

ಪಿ.ಆರ್. 352

**ಇಂಧನ ಸಚಿವಾಲಯ**

**ವಿಷಯ :** ಮೆ॥ ಬಲಿಯಾನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ 4.00 ಮೆಗಾವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ.

**ಓದಲಾಗಿದೆ:** 1. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ: ಕೆಆರ್ ಇಡಿ/06/ನಾರಾಯಣಪುರ ರಿವರ್‌ಬೆಡ್ ಎಂಹೆಚ್‌ಎಸ್/09/1241, ದಿನಾಂಕ 12–03–2009.

2. ದಿನಾಂಕ 23–10–2009 ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರಗಳಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಮೆ॥ ಬಲಿಯಾನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಲಿಂಗಸುಗುರು ತಾಲ್ಲೂಕಿನ ನಾರಾಯಣಪುರ dam reservoir and the river down streamಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ: 23–10–2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. ಮೆ॥ ಬಲಿಯಾನ್ ಪವರ್ ಪ್ರೈವೇಟ್ ಇವರಿಗೆ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ:–

**ಸರ್ಕಾರದ ಆದೇಶ ಸಂಖ್ಯೆ: ಇಎನ್ 258 ಎನ್‌ಸಿಇ 2009, ಬೆಂಗಳೂರು, ದಿನಾಂಕ: 29ನೇ ಜನವರಿ 2010.**

ಮೆ॥ ಬಲಿಯಾನ್ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ರಾಯಚೂರು ಜಿಲ್ಲೆಯ ಲಿಂಗಸುಗುರು ತಾಲ್ಲೂಕಿನ ನಾರಾಯಣಪುರ dam reservoir and the river down stream ಗೆ ಅಡ್ಡಲಾಗಿ 4.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude: 16°13'38" Longitude:76 °13'23" Power House-Latitude: 16 °13'38" Longitude:76 °13'23") ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.:–

1(ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ

(ಇ) ಒಡಂಬಡಿಕೆಯನ್ನು ರೂ. 400.00 ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್. ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ) ಪರಿಷ್ಕರಣ ಶುಲ್ಕವನ್ನು ತುಂಬುವುದು.

2(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರ ರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆ ಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದುಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 353

**(ಎಸ್. ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ :** ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಅಧಿಕೃತ ನಿವಾಸಕ್ಕೆ ಪ್ಯಾನಾಸೋನಿಕ್ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ಮರು ಅಳವಡಿಸಿರುವ ವೆಚ್ಚ ಪಾವತಿ ಮಾಡುವ ಬಗ್ಗೆ.

**ಓದಲಾಗಿದೆ:** 1) ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಆಪ್ತ ಕಾರ್ಯದರ್ಶಿಯವರ ಟಿಪ್ಪಣಿ ಸಂಖ್ಯೆ:ಮಮಅಸ/ಆಕಾ/848/2009 ದಿನಾಂಕ 14–12–2009.

2) ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 273 ಡಿಟಿಎನ್ 2008 ದಿನಾಂಕ 30–11–2009.

3) ಸರ್ಕಾರದ ಪತ್ರ ಸಂಖ್ಯೆ : ಸಿಆಸುಇ 505 ಡಿಟಿಎನ್ 2009 ದಿನಾಂಕ 01-01–2010.

4) ಮೆ॥ ಸ್ವಿಸ್ ಮಾರ್ಕೆಟಿಂಗ್ ಕಂ., ಬೆಂಗಳೂರು ಸಂಸ್ಥೆಯ ಬಿಲ್ ಸಂಖ್ಯೆ 441, ದಿನಾಂಕ : 01–01–2010.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1) ರಲ್ಲಿನ ಟಿಪ್ಪಣಿಯಲ್ಲಿ ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಅಧಿಕೃತ ನಿವಾಸ ನಂ. 07, ಸಪ್ತ ಸಚಿವರ ನಿವಾಸ, ಸ್ಯಾಂಕಿ ರಸ್ತೆ, ಬೆಂಗಳೂರು, ಇಲ್ಲಿಗೆ ಇಪಿಎಬಿಎಕ್ಸ್ ಪ್ಯಾನಾಸೋನಿಕ್ ಕೀ–ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು ಅಳವಡಿಸುವಂತೆ ಸಚಿವರ ಆಪ್ತ ಕಾರ್ಯದರ್ಶಿಯವರಿಂದ ಕೋರಿಕೆ ಬಂದಿತ್ತು. ಮೇಲೆ ಓದಲಾದ ಕ್ರಮ ಸಂಖ್ಯೆ (2) ರ ಆದೇಶದಲ್ಲಿ ಸಿ.ಆ.ಸು.ಇಲಾಖೆ (ಕಾರ್ಯಕಾರಿ) ಶಾಖೆಯ ವಶದಲ್ಲಿರುವ ಪ್ಯಾನಾಸೋನಿಕ್ ಕೀ– ಟೆಲಿಫೋನ್ ಸಂಪರ್ಕ ವ್ಯವಸ್ಥೆಯ ಕೇಬ್ಲಿಂಗ್ ಮತ್ತು ಕೇಸಿಂಗ್ ವೆಚ್ಚವನ್ನು ಮೀಟರ್‌ಗೆ ರೂ. 14/– ರಂತೆ ನಿಗದಿಪಡಿಸಲಾಗಿದೆ. ಅದರಂತೆ ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಅಧಿಕೃತ ನಿವಾಸಕ್ಕೆ

ಪ್ಯಾನಾಸೋನಿಕ್ ಕೀ ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು (3+1) 4 ವಿಸ್ತರಣೆಗಳೊಂದಿಗೆ ಒಂದು ಮೀಟರ್‌ಗೆ ರೂ. 14/– ವೆಚ್ಚದಲ್ಲಿ (ಕೇಬ್ಲಿಂಗ್ ಮತ್ತು ಕೇಸಿಂಗ್ ವೆಚ್ಚ ಸೇರಿ) ಅಳವಡಿಸುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (3) ರ ಪತ್ರದಲ್ಲಿ ಸದರಿ ಸಂಸ್ಥೆಯನ್ನು ಕೋರಲಾಗಿತ್ತು. ಅದರಂತೆ ಸಚಿವರ ಅಧಿಕೃತ ನಿವಾಸಕ್ಕೆ ಪ್ಯಾನಾಸೋನಿಕ್ ಕೀ ಟೆಲಿಪೋನ್ ವ್ಯವಸ್ಥೆಯನ್ನು ಮರು ಅಳವಡಿಸಿರುವ ಒಟ್ಟು ವೆಚ್ಚ ರೂ. 8,820.00 ನ್ನು ಪಾವತಿಸುವಂತೆ ಮೆ॥ ಸ್ವಿಸ್ ಮಾರ್ಕೆಟಿಂಗ್ ಕಂ., ಬೆಂಗಳೂರು ಸಂಸ್ಥೆಯು ಮೇಲೆ ಓದಲಾದ ಕ್ರಮ ಸಂಖ್ಯೆ (4) ರಲ್ಲಿನ ಬಿಲ್ಲನ್ನು ಪಾವತಿಗಾಗಿ ಸಲ್ಲಿಸಿದೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 505 ಡಿಟಿಎನ್ 2009, ಬೆಂಗಳೂರು, ದಿನಾಂಕ 05.02.2010.**

ಪ್ರಸ್ತಾವನೆಯಲ್ಲಿನ ವಿವರಣೆಯನ್ವಯ ಮಾನ್ಯ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವರ ಅಧಿಕೃತ ನಿವಾಸ ನಂ. 07, ಸಪ್ತ ಸಚಿವರ ನಿವಾಸ, ಸ್ಯಾಂಕಿ ರಸ್ತೆ, ಬೆಂಗಳೂರು. ಇಲ್ಲಿಗೆ ಸಿ.ಆ.ಸು.ಇ. (ಕಾರ್ಯಕಾರಿ–ಎ) ಶಾಖೆಯ ದಾಸ್ತನಿನಲ್ಲಿದ್ದ ಪ್ಯಾನಾಸೋನಿಕ್ ಕೀ– ಟೆಲಿಫೋನ್ ಸಂಪರ್ಕ ವ್ಯವಸ್ಥೆಯನ್ನು 4 (3+1) ವಿಸ್ತರಣೆಗಳೊಂದಿಗೆ ಮರು ಅಳವಡಿಸಿರುವ (ಕೇಬ್ಲಿಂಗ್ ಮತ್ತು ಮರು ಅಳವಡಿಕೆ ವೆಚ್ಚ ಸೇರಿ) ವೆಚ್ಚ ರೂ. 8,820.00 (ರೂ. ಎಂಟು ಸಾವಿರದ ಎಂಟು ನೂರ ಇಪ್ಪತ್ತು ಮಾತ್ರ) (ತೆರಿಗೆ ಸೇರಿ) ಗಳನ್ನು ಮೆ॥ ಸ್ವಿಸ್ ಮಾರ್ಕೆಟಿಂಗ್ ಕಂ., ನಂ. 277/14, ಪೋಸ್ಟ್ ಆಫೀಸ್ ಎದುರು, 10ನೇ ಕ್ರಾಸ್, ವಿಲ್ಸನ್ ಗಾರ್ಡನ್, ಬೆಂಗಳೂರು–27 ಸಂಸ್ಥೆಗೆ ಪಾವತಿ ಮಾಡಲು ಈ ಮೂಲಕ ಮಂಜೂರಾತಿ ನೀಡಲಾಗಿದೆ.

ಈ ವೆಚ್ಚವನ್ನು ಆಯವ್ಯಯ ಲೆಕ್ಕಶೀರ್ಷಿಕೆ "2013–ಮಂತ್ರಿಮಂಡಲ–800–ಇತರೆ ವೆಚ್ಚಗಳು–051–ಸಾಮಾನ್ಯ ವೆಚ್ಚಗಳು" ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ ಎಫ್‌ಡಿ 1 ಟಿಎಫ್‌ಪಿ 1996, ದಿನಾಂಕ 10–07–1996 ರಲ್ಲಿ ಇಲಾಖೆಯ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 366

**(ಕೆ.ಎಸ್. ಮಂಜುನಾಥ್)**

ಸರ್ಕಾರದ ಅಧೀನ ಕಾರ್ಯದರ್ಶಿ

ಸಿ.ಆ.ಸು.ಇಲಾಖೆ (ಕಾರ್ಯಕಾರಿ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಜಿಲ್ಲಾ ಆಸ್ಪತ್ರೆ, ತುಮಕೂರು ಮತ್ತು ಹಾವೇರಿ ಇಲ್ಲಿ ನರ್ಸಿಂಗ್ ಶಾಲೆಯನ್ನು ಪ್ರಾರಂಭಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :**
1) ಪತ್ರ ಸಂಖ್ಯೆ ಕರಾಶುಪ:177:2008–09 ದಿನಾಂಕ 28.01.2009
2) ಪತ್ರ ಸಂಖ್ಯೆ ಕರಾಶುಪ:178:2008–09 ದಿನಾಂಕ 28.01.2009
3) ಪತ್ರ ಸಂಖ್ಯೆ ವೈಶಿನಿ/ಎಂಇಪಿ (1)16/2009–10 ದಿನಾಂಕ 09–11–2009 ಮತ್ತು 31.12.2009.

**ಪ್ರಸ್ತಾವನೆ :**

ತುಮಕೂರು ಮತ್ತು ಹಾವೇರಿಯಲ್ಲಿ ಆ ಭಾಗಗಳ ಬಡ ಮತ್ತು ಪ್ರತಿಭಾವಂತ ವಿದ್ಯಾರ್ಥಿಗಳ ಅನುಕೂಲಕ್ಕಾಗಿ ನರ್ಸಿಂಗ್ ಶಾಲೆಯನ್ನು ಪ್ರಾರಂಭಿಸಲು ಸಾರ್ವಜನಿಕರಿಂದ ಬೇಡಿಕೆಯಿರುತ್ತದೆ. ಕರ್ನಾಟಕ ರಾಜ್ಯ ಶುಶ್ರೂಷ ಪರಿಷತ್ತು ಮೇಲೆ ಓದಲಾದ (1) ಮತ್ತು (2) ರ ತಮ್ಮ ಪತ್ರಗಳಲ್ಲಿ ಜಿಲ್ಲಾ ಆಸ್ಪತ್ರೆ, ತುಮಕೂರು ಮತ್ತು ಹಾವೇರಿ ಇಲ್ಲಿ ಮೂಲಭೂತ ಸೌಲಭ್ಯಗಳನ್ನು ಹೊಂದಿರುವುದರಿಂದ ಹೊಸದಾಗಿ ಸರ್ಕಾರಿ ನರ್ಸಿಂಗ್ ಶಾಲೆಯನ್ನು ಪ್ರಾರಂಭಿಸಲು ಕರ್ನಾಟಕ ರಾಜ್ಯ ಶುಶ್ರೂಷ ಪರಿಷತ್ತು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತದೆ.

ವೈದ್ಯಕೀಯ ಶಿಕ್ಷಣ ನಿರ್ದೇಶಕರು, ಓದಲಾದ (3) ರ ಪತ್ರದಲ್ಲಿ ಜಿಲ್ಲಾ ಆಸ್ಪತ್ರೆ, ತುಮಕೂರು ಮತ್ತು ಹಾವೇರಿ ಇಲ್ಲಿ ಸರ್ಕಾರಿ ನರ್ಸಿಂಗ್ ಶಾಲೆಯನ್ನು ಪ್ರಾರಂಭಿಸಲು ಅವಶ್ಯವಿರುವ ಅನುದಾನ ಸಮೇತ ಅನುಮತಿ ನೀಡಿ ಸರ್ಕಾರಿ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ವಿಷಯವನ್ನು ಸಂಬಂಧಿಸಿದ ದಾಖಲೆಗಳೊಂದಿಗೆ ಕೂಲಂಕಷವಾಗಿ ಪರಿಶೀಲಿಸಿದ ನಂತರ ಜಿಲ್ಲಾ ಆಸ್ಪತ್ರೆ, ತುಮಕೂರು ಮತ್ತು ಹಾವೇರಿ ಇಲ್ಲಿ ಸರ್ಕಾರಿ ನರ್ಸಿಂಗ್ ಶಾಲೆಯನ್ನು ಪ್ರಾರಂಭಿಸಲು ಅನುಮತಿಯನ್ನು ನೀಡಲು ಸರ್ಕಾರವು ತೀರ್ಮಾನಿಸಿ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 84 ಎಂಎಂಇ 2008, ಬೆಂಗಳೂರು, ದಿನಾಂಕ: 04.02.2010.**

ಜಿಲ್ಲಾ ಆಸ್ಪತ್ರೆ, ತುಮಕೂರು ಮತ್ತು ಜಿಲ್ಲಾ ಆಸ್ಪತ್ರೆ ಹಾವೇರಿ ಇಲ್ಲಿ ತಲಾ ಒಂದು ಸರ್ಕಾರಿ ನರ್ಸಿಂಗ್ ಶಾಲೆಯನ್ನು ಪ್ರಾರಂಭಿಸಲು ಸರ್ಕಾರದ ಅನುಮೋದನೆಯನ್ನು ನೀಡಲಾಗಿದೆ.

ಇವುಗಳಿಗೆ ತಗಲುವ ವೆಚ್ಚವನ್ನು 2010–11ನೇ ಸಾಲಿನ ಹೊಸ ಯೋಜನೆಗಳಾಗಿ ತೆಗೆದುಕೊಂಡು ಆಯವ್ಯಯದಲ್ಲಿ ಇಲಾಖೆಯ ಒಟ್ಟಾರೆ ಯೋಜನಾ ವೆಚ್ಚಮಿತಿಯಲ್ಲಿ ಅವಕಾಶ ಮಾಡಿಕೊಂಡು ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ ಆಇ 1444 ವೆಚ್ಚ–5/2009 ದಿನಾಂಕ 03.12.2009ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 367

**(ವಿ. ಶ್ರೀರಾಮರೆಡ್ಡಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ವೈದ್ಯಕೀಯ ಶಿಕ್ಷಣ)

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇಲ್ಲಿಗೆ ಸಂದರ್ಶಕರ ಸಮಿತಿಯನ್ನು (Board of Visitors) ರಚಿಸುವ ಬಗ್ಗೆ.

**ಓದಲಾಗಿದೆ :** ನಿರ್ದೇಶಕರು, ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇವರ ಪತ್ರ ಸಂಖ್ಯೆ:ಪಿಇಆರ್/ಕ್ಯಾಬ್–1/ಡಿ/6/2008, ದಿನಾಂಕ 23–12–2008 & ಪಿಇಆರ್/ಕ್ಯಾಬ್1/ಡಿ/4/2009, ದಿನಾಂಕ 23–06–2009.

**ಪ್ರಸ್ತಾವನೆ :**

ಮೇಲೆ ಓದಲಾದ ಪತ್ರಗಳಲ್ಲಿ, ನಿರ್ದೇಶಕರು, ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇವರು ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆಗೆ ಸಂದರ್ಶಕರ ಸಮಿತಿಯನ್ನು (Board of Visitors) ರಚಿಸಲು ಕೋರಿರುತ್ತಾರೆ.

ಸರ್ಕಾರವು ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 411 ಪಿಟಿಡಿ 2008, ಬೆಂಗಳೂರು, ದಿನಾಂಕ: 05.02.2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇಲ್ಲಿಗೆ ಈ ಕೆಳಕಂಡಂತೆ ಸಂದರ್ಶಕರ ಸಮಿತಿಯನ್ನು (Board of Visitors) ಮುಂದಿನ ಆದೇಶದವರೆಗೆ ರಚಿಸಿ ಆದೇಶಿಸಲಾಗಿದೆ.

| | | | |
|---|---|---|---|
| 1 | ಶ್ರೀ ಡಾ॥ ಶಾಂತವೀರ ಮಹಾಸ್ವಾಮೀಜಿ<br>ಕೊಳದ ಮಠ, ಬೆಂಗಳೂರು. | – | ಅಧ್ಯಕ್ಷರು |
| 2 | ಪ್ರೊ॥ ದೊಡ್ಡರಂಗೇಗೌಡ<br>ವಿಧಾನ ಪರಿಷತ್ ಸದಸ್ಯರು | – | ಸದಸ್ಯರು |
| 3 | ಶ್ರೀಮತಿ ಜಿ. ಪುತಳಿಬಾಯಿ<br>ನಂ. 10, 3ನೇ ಕ್ರಾಸ್, ಚೋಳರ ಪಾಳ್ಯ, ವಿಜಯನಗರ, ಬೆಂಗಳೂರು | – | ಸದಸ್ಯರು |
| 4 | ಶ್ರೀ ಎಂ.ಎಂ. ಶ್ರೀಕಂಠಸ್ವಾಮಿ (S.C)<br>ನಂ. 6, 11ನೇ ಕ್ರಾಸ್, ಮಂಜುನಾಥ ನಗರ, ಮಾಗಡಿ ರಸ್ತೆ, ಬೆಂಗಳೂರು | – | ಸದಸ್ಯರು |
| 5 | ನಿರ್ದೇಶಕರು<br>ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು | – | ಸದಸ್ಯ ಕಾರ್ಯದರ್ಶಿ |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 368

**(ಎನ್. ಮಹಾಲಕ್ಷ್ಮಮ್ಮ)**
ಸರ್ಕಾರದ ಅಧೀನ ಕಾರ್ಯದರ್ಶಿ
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ
(ಭಾರತೀಯ ವೈದ್ಯ ಪದ್ಧತಿ)

## HEALTH AND FAMILY WELFAE SECRETARIAT

**Sub :** Procurement of equipments for supply to hospitals under KSLHD KfW Project Phase-1, Gulbarga – release of balance amount – reg.

**Read :** 1) Govt. Order No. KHSDRP/Eqp/222/WBA/2004-05. Dt. 22.3.05

2) Proceedings of the 19th meeting of Programme Steering Committee dated 04.01.2010.

**Preamble:**

Under Karnataka Secondary Level Hospitals Development (KSLHD) KfW Project Phase-1, 26 hospitals had been renovated and expanded and provided with the equipments like Ultrasound Scanners. Boyles Apparatus etc. As per the request of the Administrative Medical Officers, the equipments such as Defibrillator, Foetal Monitor, ECG Machine and Gluco meter with Strips, were very much needed to these hospitals for the effective functioning.

Therefore, it was decided to equip these hospitals with the said equipments.The suppliers, who had supplied the similar items of equipments to the Health Department for use in other hospitals, were entrusted to supply the materials. Since, the Project period was coming to an end on 31.03.2005 and there was no time to call for the tenders, it was considered to procure the above 4 items of equipments from them with the overall budget at the cost of Rs. 49,39,990-00.

Under the Government Order read at (1) above, sanction was accorded to procure the above mentioned 4 items of equipments from M/s. Phillips Medical Systems India Pvt. Ltd., Bangalore and M/s. Save Meditech Systems (P) Ltd., Bangalore, An expenditure of Rs. 49,39,990-00 was included under KfW Disposition Fund. Whereas, M/s. Save Meditech Systems (P) Ltd., Bangalore supplied materials at a total cost of Rs. 25,59,990-00 only and Rs. 22,63,943.55 payment was made on 30.3.2007.

Due to the protracted correspondence with the firm for signing the contract, furnishing the bank guarantee, non-availability of funds under KfW and non-receipt of stock certificates and installation certificates by the Administrative Medical Officers, there was delay in payment.

The said company has submitted a bill for Rs. 2,85,513-00 for balance payment.

After examining all the aspects, the Programme Steering Committee has approved to release the balance amount during this financial year.

Hence, this order.

**Government Order No. KHSDRP/KfW/222/WBA/2004-05,**
**Bangalore, Dated 2nd February 2010**

Under the circumstances stated above, sanction is accorded to release Rs. 2,85,513-00 (Rupees two lakhs eighty five thousand five hundred thirteen only) to M/s. Save Meditech Systems (P) Ltd., Bangalore as balance amount for the equipments supplied by them during 2005 as final instalment.

By Order and in the name of the Governor of Karnataka,

**(M. Shashidhar)**

Deputy Secretary to Government,

KHSDRP

Health and Family Welfare Department

PR. 369

## FORESTS, ECOLOGY AND ENVIRONMENT SECRETARIAT

**Sub :** Diversion of 0.675 ha. Of forest land for the use of old approach road in D.M. Reserve Forest Block in Sandur Range of Bellary Forest Division in favour of M/s. K.E.J. Minerals Private Limited, Bangalore.

**Read :** 1) Letter No. A5 (1) MNG.CR. 7/09-10, dated 01/08/2009 of the Principal Chief Conservator of Forests, Bangalore.
2) Government of India guidelines No. 11-8/2001-FC, dated 15.11.2001.

**Preamble:**

The Principal Chief Conservator of Forests had submitted proposal vide his letter dated 01-08-2009 read at (1) above for approval of Government under Forest (Conservation) Rules 2003 for diversion of 0.675 ha. of forest land for the use of old existing approach road which is already been in use by the local people in D.M. Reserve Forest Block in Sandur Range of Bellary Forest Division in favour of M/s. K.E.J. Minerals Private Limited, Bangalore subject to certain conditions.

Company has agree to pay the cost of NPV and other charges as per the Forest Act and Rules.

After careful consideration of the proposal, State Government vide Government of India guidelines read at (2) above has considered to accord permission to use the old existing approach road in D.M. Reserve Forest Block in Sandur Range of Bellary Forest Division in favour of M/s K.E.J. Minerals Private Limited, Bangalore.

The proposal has been examined in detail and hence the order.

**Government Order No. FEE 132 FFM 2009, Bangalore, Dated 1st February 2010**

In the circumstances explained in the preamble above, Government are pleased to accord sanction under Forest (Conservation) Rules 2003 for diversion of 0.675 ha. of forest land for the use of old existing approach road as per the Government of India guidelines Letter No. 11-8/2001-FC, dated 15.11.2001 D.M. Reserve Forest Block in Sandur Range of Bellary Forest Division in favour of M/s K.E.J. Minerals Private Limited, Bangalore subject to the following conditions.

1. Legal status of forest land shall remain unchanged.
2. The lessee shall pay usual lease rent and other charges as prescribed by the Government from time to time.
3. The lessee shall carryout soil and water conservation measures and other necessary measures around the road as advised by the Forest Department from time to time.
4. The lessee shall abide by all the conditions prescribed by the Government of India and the Government of Karnataka.
5. The lessee shall execute an agreement with the Forest Department binding himself to abide by all usual conditions and terms as per orders of the Government as well as the Principal Chief Conservator of Forests.
6. The lessee shall take-up the planting work on both side of road at his cost and maintain continuously till the end of lease period.
7. In case of violation of agreement conditions. The Forest Department shall have right to suspend the approval.
8. The road should be mettled and proper drainage should be provided.

9. The Conservator of Forests is authorised under section 82 of the Karnataka Forest Act 1963 to forfeit the land if any violation is noticed.
10. The lessee shall convert the road in to a Deammered road and maintain it at his cost till the end of lease period. Before expiry of lease period the lessee has to restore the road to its original form by removing the hard cover and planting with natural species.
11. If other user agencies are already using this existing road, there should not be any objection. Their right continues.
12. In future, if necessity arises for any authority to use the same road there should not be any objection whatsoever.
13. The user agency has to bear the expenditure as raised by the Deputy Conservator of Forests, Bellary towards pool proof fencing all along the road towards the forest blocks in order to protect the natural forest and old Kamara plantations.
14. The user agency has to pay the Net Present Value as per the Hon'ble Supreme Court of India Orders dated 28-3-2008 and 9-5-2008.
15. Any other condition that the State Government/Government of India/Principal Chief Conservator of Forests may impose from time to time in the interest of conservation, protection and development of forests.

By Order and in the name of the Governor of Karnataka,

**(H.M. Mallikarjuna Swamy)**

Under Secretary to Government,

Forests, Ecology and Environment Department

PR. 370

## COMMERCE & INDUSTRIES SECRETARIAT

## CORRIGENDUM

**No. CI 215 SPI 2009, Bangalore, Dated 4th February 2010**

**Sub :** Selection of consultants for providing consultancy services of Event Management. Media Consultancy and Knowledge Partnership for Global Investors Meet 2010 – Approval for Selection of preferred bidder – reg.

**Read :**
1. Govt. Order No. CI 215 SPI 2009 dated 09.09.2009.
2. Letter No. KUM/E5/754/2008-09 dated 30.01.2010 of the Managing Director, Karnataka Udyog Mitra, Bangalore.

Govt. Order read at (1) above was issued appointing M/s JWT. Bangalore as a lead partner of the consortium of consultants. Vide reference (2) above Managing Director. Karnataka Udyog Mitra has requested for amendment of the original Govt. Order enabling him to enter into an agreement with M/s HTA in view of the following reasons.

M/s JWT. Bangalore had participated in the tender floated for selection of a consultant as a lead partner of the consortium of M/s JWT, Bangalore. IPAN Hill & Knowlton, Bangalore and Encompass Events Private Limited. The unit had emerged as a successful bidder with lowest quotation for providing the consultancy services and is selected for appointment as consultant on behalf of JWT, Bangalore IPAN Hill & Knowlton and Encompass Events Private Limited.

However, JWT, Bangalore and IPAN Hill & Knowlton are the units of Hindustan Thompson Associates Private Limited, Mumbai, India. As Hindustan Thompson Associates Private Limited is the legal entity for entering into an agreement, Karnataka Udyog Mitra is hereby permitted to enter into agreement with M/s Hindusthan Thompson Associates Private Limited for availing the consultancy services in the field of knowledge partnership, media

consultancy and event management for the conduct of Global Investors Meet – 2010. M/s Hindustan Thompson Associates Private Limited shall function as a lead partner of the consortium of consultants comprising JWT. Bangalore. IPAN Hill & Knowlton and Encompass Events Private Limited it shall be the responsibility of Hindustan Thompson Associates Private Limited. Mumbai, India to provide the agreed consultancy services through JWT, Bangalore, IPAN Hill & Knowlton and Encompass Events Private Limited Managing Director, Karnataka Udyog Mitra is hereby directed to incorporate appropriate clauses in the Agreement.

By Order and in the name of the Governor of Karnataka,
**(Aparna Pavate)**
Desk Officer (Technical Cell)
Commerce & Industries Department

PR. 371

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಸಚಿವಾಲಯ

**ವಿಷಯ :** 2ನೇ ಹಂತದ ನಗರಗಳಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳ ಸ್ಥಾಪನೆಗಾಗಿ 2009–10ನೇ ಸಾಲಿನ ಆಯವ್ಯಯದಲ್ಲಿ ಒದಗಿಸಲಾಗಿರುವ ರೂ. 5.00 ಕೋಟಿಗಳ ಅನುದಾನದಲ್ಲಿ ಉಳಿದ ರೂ. 250.00 ಲಕ್ಷಗಳನ್ನು ಕಿಯೋನಿಕ್ಸ್ ಸಂಸ್ಥೆಗೆ ಈಕ್ವಿಟಿ ಮೊತ್ತವಾಗಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :**
1) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008, ದಿನಾಂಕ 25.11.2008,
2) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008, ದಿನಾಂಕ 25.02.2009,
3) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 59 ಎಂಡಿಎ 2008, ದಿನಾಂಕ 5.10.2009,
4) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008, ದಿನಾಂಕ 21.11.2009,
5) ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 24 ಎಂಡಿಎ 2008, ದಿನಾಂಕ 1.2.2010,
6) ವ್ಯವಸ್ಥಾಪಕ ನಿರ್ದೇಶಕರು ಕಿಯೋನಿಕ್ಸ್ ಪತ್ರ ಸಂಖ್ಯೆ ಕೆಎಸ್‌ಇಡಿಸಿ/ಎಫ್&ಎ/2009–10, ದಿನಾಂಕ 01–01–2010.

**ಪ್ರಸ್ತಾವನೆ :**

ಮೇಲೆ (2) ರಲ್ಲಿ ಓದಲಾದ ದಿನಾಂಕ 25–02–2009 ರ ಸರ್ಕಾರಿ ಆದೇಶದಲ್ಲಿ 2ನೇ ಹಂತದ ನಗರಗಳಾದಂತಹ ಮಂಗಳೂರು, ಮೈಸೂರು, ಶಿವಮೊಗ್ಗ, ಬೆಳಗಾಂ, ದಾವಣಗೆರೆ ಹಾಗೂ ಹುಬ್ಬಳ್ಳಿ–ಧಾರವಾಡದಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳ ಸ್ಥಾಪನೆಗಾಗಿ 2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು – ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ–059–ಇತರೆ ಖರ್ಚು" ಅಡಿಯಲ್ಲಿ ಒದಗಿಸಲಾಗಿರುವ ರೂ. 10.00 ಕೋಟಿ ಈಕ್ವಿಟಿ ಅನುದಾನದಲ್ಲಿ ರೂ. 5.00 ಕೋಟಿಗಳನ್ನು ಈಕ್ವಿಟಿ ಮೊತ್ತವಾಗಿ ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (1) ಮತ್ತು (3) ರಲ್ಲಿ ಓದಲಾದ ದಿನಾಂಕ 25–11–2008 ಹಾಗೂ ದಿನಾಂಕ 05–10–2009 ರ ಸರ್ಕಾರಿ ಆದೇಶದಲ್ಲಿ ಮೈಸೂರು ಮಂಗಳೂರಿನಲ್ಲಿ ರೂ. 31.68 ಕೋಟಿ ಹಾಗೂ ಶಿವಮೊಗ್ಗದಲ್ಲಿ ರೂ. 15.46 ಕೋಟಿ ವೆಚ್ಚದಲ್ಲಿ ಐಟಿ ಪಾರ್ಕ್‌ಗಳನ್ನು ಕಿಯೋನಿಕ್ಸ್‌ನ ಸ್ವಂತ ಬಂಡವಾಳ ಹಾಗೂ ಖಾಸಗಿ ಸಹಭಾಗಿತ್ವದ ಮಾದರಿಯಲ್ಲಿ (PPP Mode) ನಲ್ಲಿ ಮಾಹಿತಿ ತಂತ್ರಜ್ಞಾನ ಪಾರ್ಕ್‌ಗಳನ್ನು ಸ್ಥಾಪಿಸಲು ಸರ್ಕಾರದ ಅನುಮತಿಯನ್ನು ನೀಡಲಾಗಿದೆ.

ಮೇಲೆ (4) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಿಯೋನಿಕ್ಸ್ ಸಂಸ್ಥೆಯವರು ಕಾರ್ಯಗತಗೊಳಿಸುವ ಶಿವಮೊಗ್ಗ, ಮಂಗಳೂರು, ಮೈಸೂರು, ಬೆಳಗಾಂ ಹಾಗೂ ಹುಬ್ಬಳ್ಳಿ–ಧಾರವಾಡದಲ್ಲಿ ಐಟಿ ಪಾರ್ಕ್ ಸ್ಥಾಪಿಸಲು ಅನುವಾಗುವಂತೆ, ಹಂತ 2 ನಗರಗಳಲ್ಲಿ ಐಟಿ ಪಾರ್ಕ್ ಸ್ಥಾಪಿಸುವ ಸಲುವಾಗಿ 2009–10 ನೇ ಸಾಲಿನ ಲೆಕ್ಕಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು – ಮಾಹಿತಿ ತಂತ್ರಜ್ಞಾನ ಅಭಿವೃದ್ಧಿ–059–ಇತರೆ ಖರ್ಚು (ಯೋಜನೆ)" ಇದರಡಿಯಲ್ಲಿ ಒದಗಿಸಲಾಗಿರುವ ರೂ. 5 ಕೋಟಿಗಳ ಈಕ್ವಿಟಿ ಅನುದಾನದಲ್ಲಿ ರೂ. 250.00 ಲಕ್ಷಗಳ ಈಕ್ವಿಟಿ ಮೊತ್ತವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (5) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಗುಲ್ಬರ್ಗದಲ್ಲಿ ಮಾಹಿತಿ ತಂತ್ರಜ್ಞಾನ ಉದ್ಯಾನವನ್ನು ಸ್ಥಾಪಿಸಲು ರೂ. 200.00 ಲಕ್ಷಗಳ ಅನುದಾನವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲಾಗಿದೆ.

ಮೇಲೆ (6) ರಲ್ಲಿ ಓದಲಾದ ಕಿಯೋನಿಕ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕರ ಪತ್ರದಲ್ಲಿ ಶಿವಮೊಗ್ಗದಲ್ಲಿ ಎಸ್‌ಇಜೆಡ್ ಹಾಗೂ ನಾನ್ ಎಸ್‌ಇಜೆಡ್ ಐಟಿ ಪಾರ್ಕ್‌ಗಳನ್ನು ಸ್ಥಾಪನೆ, ಮಂಗಳೂರು, ಮೈಸೂರಿನಲ್ಲಿ ಐಟಿ ಪಾರ್ಕ್ ಸ್ಥಾಪನೆ, ಪ್ರಸ್ತಾವಿತ ಚಟುವಟಿಕೆಗಳ ಹಾಗೂ ಗುಲ್ಬರ್ಗದಲ್ಲಿ ಐಟಿ ಪಾರ್ಕ್ ಸ್ಥಾಪನೆ ಮಾಡುವ ಬಗ್ಗೆ ಹಾಗೂ ಬೆಳಗಾವಿಯಲ್ಲಿ ಐಟಿ ಪಾರ್ಕ್ ಸ್ಥಾಪನೆ ಮಾಡುವ ಉದ್ದೇಶದ ಬಗ್ಗೆ ಉಲ್ಲೇಖಿಸುತ್ತಾ, ಉಳಿದ ರೂ. 250 ಲಕ್ಷಗಳ ಅನುದಾನವನ್ನು ಕಿಯೊನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಮೇಲೆ ಉಲ್ಲೇಖಿಸಿರುವ ಲೆಕ್ಕಶೀರ್ಷಿಕೆಯಡಿ ಲಭ್ಯವಿರುವ ಮೊತ್ತ ರೂ. 50 ಲಕ್ಷಗಳ ಈಕ್ವಿಟಿ ಮೊತ್ತವನ್ನು ಕಿಯೋನಿಕ್ಸ್ ಸಂಸ್ಥೆಗೆ ಬಿಡುಗಡೆ ಮಾಡಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಮಾತಂಇ 38 ಎಂಡಿಎ 2008, ಬೆಂಗಳೂರು, ದಿನಾಂಕ: 06.02.2010.**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಕಿಯೋನಿಕ್ಸ್ ಸಂಸ್ಥೆಯ ವತಿಯಿಂದ ಹಂತ–2 ನಗರಗಳಲ್ಲಿ ಐಟಿ ಪಾರ್ಕ್ ಸ್ಥಾಪಿಸುವ ಸಲುವಾಗಿ ಪ್ರಸಕ್ತ ಸಾಲಿನ ಲೆಕ್ಕಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು – ಮಾಹಿತಿ ತಂತ್ರಜ್ಞಾನ ಆಭಿವೃದ್ಧಿ–059–ಇತರೆ ಖರ್ಚು (ಯೋಜನೆ)" ಇದರಡಿಯಲ್ಲಿ ಒದಗಿಸಿರುವ ಅನುದಾನದಲ್ಲಿ ಲಭ್ಯವಿರುವ ಮೊತ್ತ ರೂ. 50.00 ಲಕ್ಷಗಳನ್ನು (ರೂ. ಐವತ್ತು ಲಕ್ಷಗಳು ಮಾತ್ರ) ಕಿಯೋನಿಕ್ಸ್ ಸಂಸ್ಥೆಗೆ ಈಕ್ವಿಟಿ ಮೊತ್ತವಾಗಿ ನೀಡಲು ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ ಇವರಿಗೆ ಸರ್ಕಾರದ ಮಂಜೂರಾತಿ ನೀಡಿದೆ.

ಈ ಈಕ್ವಿಟಿ ಮೊತ್ತದ ಬಿಡುಗಡೆಯು ಸರ್ಕಾರದ ಆದೇಶ ಸಂಖ್ಯೆ ಐಟಿಡಿ 38 ಎಂಡಿಎ 2008 ದಿನಾಂಕ 25–02–2009 ರಲ್ಲಿ ವಿಧಿಸಿರುವ ಷರತ್ತುಗಳಿಗೊಳಪಟ್ಟಿದೆ.

ಸದರಿ ಅನುದಾನವನ್ನು ಆಡಳಿತಾಧಿಕಾರಿಗಳು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರು ನಿರ್ದೇಶಕರು ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಮೇಲು ಸಹಿ ಪಡೆದು ಖಜಾನೆಯಿಂದ ಸದರಿ ಅನುದಾನವನ್ನು ಡ್ರಾ ಮಾಡಿ ವ್ಯವಸ್ಥಾಪಕ ನಿರ್ದೇಶಕರು, ಕಿಯೋನಿಕ್ಸ್ ಇವರಿಗೆ ವಿತರಿಸತಕ್ಕದ್ದು.

ಈ ವೆಚ್ಚವನ್ನು 2009–10 ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "5465–01–190–1–13 ಹಂತ 2 ನಗರಗಳ ಸಲುವಾಗಿ ಕಿಯೋನಿಕ್ಸ್‌ನಲ್ಲಿ ಸಾಮ್ಯಷೇರು – ಮಾಹಿತಿ ತಂತ್ರಜ್ಞಾನ ಆಭಿವೃದ್ಧಿ–059–ಇತರೆ ಖರ್ಚು" (ಯೋಜನೆ)" ಅಡಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ನಿರ್ದೇಶಕರು, ಮಾಹಿತಿ ತಂತ್ರಜ್ಞಾನ ಮತ್ತು ಜೈವಿಕ ತಂತ್ರಜ್ಞಾನ ಇಲಾಖೆ, ಇವರು ಅನುದಾನದ ಬಳಕೆಯ ಬಗ್ಗೆ ವ್ಯವಸ್ಥಾಪಕ ನಿರ್ದೇಶಕರು ಕಿಯೋನಿಕ್ಸ್‌ರವರಿಂದ ಉಪಯೋಗಿತಾ ದೃಢೀಕರಣ ಪತ್ರವನ್ನು ವೆಚ್ಚ ಮಾಡಿದ ಅನುದಾನದ ವಿವರಗಳ ಜೊತೆಗೆ ಪಡೆದು ಈ ಆರ್ಥಿಕ ವರ್ಷದೊಳಗಾಗಿ ಸರ್ಕಾರಕ್ಕೆ ಒದಗಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ ಆಇ 21 ವೆಚ್ಚ–2/2010, ದಿನಾಂಕ 30–01–2010 ಇದರನ್ವಯ ಸಹಮತಿಯ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 372

**(ಎಂ.ವಿ. ಕೃಷ್ಣಮೂರ್ತಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

## ENERGY SECRETARIAT

## CORRIGENDUM

**No. EN 19 NCE 2010 dated 3.02.2009**

The village name **"Bankapura"** appearing in the Preamble and Order portion of the Government Order No. EN 208 NCE 2009 dated 21.03.2009 Shall be corrected and read as **"Banakuppe"**

By Order and in the name of the Governor of Karnataka,

PR. 373

**(S.J. SAMPATH KUMAR)**
Under Secretary to Government,
Energy Department.

**ಇಂಧನ ಸಚಿವಾಲಯ**

**ವಿಷಯ :** M/s Vyshali Energy Private Limited ಇವರಿಗೆ 6.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವ ಬಗ್ಗೆ :–

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿಎಲ್/06/ಪಲ್ಲತಡ್ಕ ಎಂಹೆಚ್‌ಎಸ್/2009/999 ದಿನಾಂಕ 25/26–2–2009

2) ದಿನಾಂಕ 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Vyshali Energy Private Limited ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಪಲ್ಲತಡ್ಕ ಗ್ರಾಮದ ಬಳಿ ಕಲ್ಮಾಕರ್ ಹಳ್ಳಕ್ಕೆ ಅಡ್ಡಲಾಗಿ 6.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ನಡವಳಿಯ ಪ್ರಕಾರ ದಿನಾಂಕ 23–10–2009ರಂದು ಜರುಗಿದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Vyshali Energy Private Limited ಇವರಿಗೆ 6.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇನ್ 176 ಎನ್‌ಸಿಇ 2009, ಬೆಂಗಳೂರು, ದಿನಾಂಕ 01–02–2010**

M/s Vyshali Energy Private Limited ಇವರಿಗೆ ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲ್ಲೂಕಿನ ಪಲ್ಲತಡ್ಕ ಗ್ರಾಮದ ಬಳಿ ಕಲ್ಮಾಕರ್ ಹಳ್ಳಕ್ಕೆ ಅಡ್ಡಲಾಗಿ 6.75 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು (Weir Latitude : 12º36`05” Longitude : 75º36’50” Power House-Latitude: 12º36’45” Longitude : 75º37’05”) ಈ ಕೆಳಗಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಲಾಗಿದೆ.

1 (ಅ) ಸದರಿ ಯೋಜನೆಯಿಂದ ಕೆಳತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ 45 ದಿನಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ)ಒಡಂಬಡಿಕೆಯನ್ನು ರೂ. 400.00 ರ ಛಾಪಾ ಕಾಗದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ)ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾಭಿವೃದ್ಧಿದಾರರು ಕರ್ನಾಟಕ ನವೀಕರಿಸ ಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್.) ಪರಿಷ್ಕರಿಸಲು ಮೆಗಾವ್ಯಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣ ಶುಲ್ಕವನ್ನು ತುಂಬುವುದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ ಮತ್ತು ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ವಿದ್ಯುತ್ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

2 (ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.
4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.
5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನು ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.
6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.
7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ/ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.
8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್/ ನೀರಾವರಿ/ ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ಅಭಿವೃದ್ಧಿದಾರರು ನಿರೀಕ್ಷಿಸುವಂತಿಲ್ಲ.
9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.
10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.
11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.
12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿದ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 361

**(ಎಸ್.ಜೆ. ಸಂಪತ್ ಕುಮಾರ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ

**ಇಂಧನ ಸಚಿವಾಲಯ**

**ವಿಷಯ :** M/s Vyshali Energy Private Limited ಇವರಿಗೆ 30.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆ ಹಂಚಿಕೆ ಬಗ್ಗೆ :–

**ಓದಲಾಗಿದೆ :** 1) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರಗಳ ಸಂಖ್ಯೆ : ಕೆಆರ್‌ಇಡಿ/08/ವಿಇಪಿಎಲ್/2009/920(ಎ) ದಿನಾಂಕ 18/21–2–2009 ಮತ್ತು ಸಂಖ್ಯೆ : ಕೆಆರ್‌ಇಡಿ/08/ವಿಇಪಿಎಲ್/2009/2078, ದಿನಾಂಕ 19–5–2009/2–7–2009

2) ದಿನಾಂಕ 23–10–2009ರಂದು ನಡೆದ ಹಂಚಿಕೆ ಸಮಿತಿ ಸಭೆಯ ನಡವಳಿಗಳು.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು M/s Vyshali Energy Private Limited ಇವರಿಗೆ ಬಿಜಾಪುರ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಒಟ್ಟು 30.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡುವಂತೆ ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಹಂಚಿಕೆ ಸಮಿತಿ ಸಭೆಯ ಮುಂದೆ ಸದರಿ ಪ್ರಸ್ತಾವನೆಯನ್ನು ಮಂಡಿಸಲಾಗಿತ್ತು. M/s Vyshali Energy Private Limited ಇವರಿಗೆ 30.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಬಿಜಾಪುರ ಜಿಲ್ಲೆಯಲ್ಲಿ ಹಂಚಿಕೆ ಮಾಡಲು ಹಂಚಿಕೆ ಸಮಿತಿಯು ಪರಿಗಣಿಸಿರುತ್ತದೆ. ಆದುದರಿಂದ ಈ ಕೆಳಗಿನಂತೆ ಆದೇಶಿಸಲಾಗಿದೆ :–

**ಸರ್ಕಾರದ ಆದೇಶ ಸಂಖ್ಯೆ : ಇಎನ್ 86 ಎನ್‌ಸಿಇ 2009, ಬೆಂಗಳೂರು, ದಿನಾಂಕ 01ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ M/s Vyshali Energy Private Limited ಇವರಿಗೆ ಬಿಜಾಪುರ ಜಿಲ್ಲೆಯಲ್ಲಿ 30.00 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಯನ್ನು ಈ ಕೆಳಗೆ ವಿವರಿಸಿರುವಂತೆ ಈ ಆದೇಶದಲ್ಲಿನ ನಿಬಂಧನೆಗೊಳಪಟ್ಟು ಹಂಚಿಕೆ ಮಾಡಿದೆ :–

| Topo sheet No. | Proposed capacity in MW | Near by villages of the proposed area and district | Geographical area description of the project |
|---|---|---|---|
| 47P/ 13 | 30.00 MW | Kamathgi, Kaggod, Hadagali, Shivangi, Bijapur District | It is ground level plain area situated on the SW and West of Shivangi village. The suggested area consists of water bodies gravel waste, stony waste and is completely open terrain. The area as moderate elevation varying from 560 to 600 mtrs. The area is held in the following Geographical Co-ordinates :<br>**Latitude :** 16°45'0" -16°50'0"N<br>**Longitude :** 75°53'5"-76°0'0" E<br>**Ridge peaks :** 578,564,577,575,552m Amsl |

1. ಸದರಿ ಯೋಜನೆಯನ್ನು financial closure ಸಾಧಿಸಿದ 24 ತಿಂಗಳುಗಳ ಒಳಗಾಗಿ ಪ್ರಾರಂಭ ಮಾಡತಕ್ಕದ್ದು
2. ಈ ಆದೇಶ ಹೊರಡಿಸಿದ ದಿನಾಂಕದಿಂದ 45 ದಿನಗಳೊಳಗಾಗಿ ಯೋಜನಾಭಿವೃದ್ಧಿದಾರರು ರೂ. 400.00ರ ಛಾಪಾ ಕಾಗದದಲ್ಲಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳುವುದು. ತಪ್ಪಿದಲ್ಲಿ ಈ ಹಂಚಿಕೆ ಆದೇಶ ತಂತಾನೆ ರದ್ದಾಗಿದೆ ಎಂದು ಭಾವಿಸುವುದು.
3. ಹಂಚಿಕೆದಾರರು ಪೂರ್ತಿ ಒಂದು ಪವನ ವರ್ಷಕ್ಕೆ ಕಡಿಮೆ ಇಲ್ಲದಂತೆ 10 ಮೀಟರ್ ಮತ್ತು ಹಬ್ ಹೈಟ್ ಮಟ್ಟದಲ್ಲಿ ಪವನ ವೇಗದ ಅಳತೆಯನ್ನು ಮಾಡಿಕೊಳ್ಳಬೇಕು. ಅಲ್ಲದೇ, ಕಾಲ ಕಾಲಕ್ಕೆ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದಿಂದ ಹೊರಡಿಸತಕ್ಕ ಮಾರ್ಗ ಸೂಚಿಗಳಿಗನುಗುಣವಾಗಿ ಮೈಕ್ರೊ ಸ್ಕೆಟಿಂಗ್ ಮಾಡಿರುವ ಅಂಶಗಳನ್ನೊಳಗೊಂಡ ವಿವರವಾದ ಯೋಜನಾ ವರದಿಗಳ 3 ಪ್ರತಿಗಳನ್ನು ತಯಾರಿಸಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಮಂಡಿಸಬೇಕು. ತಾಂತ್ರಿಕ ಅವಶ್ಯಕ ಮತ್ತು ಹೆಚ್ಚಿನ ವಿದ್ಯುತ್ ಉತ್ಪಾದನೆಯನ್ನು ಸೇಫ್ ನಕ್ಷೆ ಮತ್ತು ವಿಂಡ್ ಫಾರ್ಮನ ಲೇ–ಔಟ್‌ನ ಬದಲಾವಣೆಗನುಗುಣವಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ಶಿಫಾರಸ್ಸಿನಂತೆ ಇದೆ ಎಂಬುದನ್ನು ಖಾತರಿ ಪಡಿಸಬೇಕು.
4. ಗಾಳಿ ಚಕ್ರದ ಹಬ್ ಹೈಟಿನಲ್ಲಿ ಪವನ ವೇಗದ ಅಳತೆ ಖಾತರಿ ಪಡಿಸಲು ಕೆಳಗಿನ ಕೋಷ್ಟಕದಲ್ಲಿ ವಿವರಿಸುವಂತೆ ಪ್ರತಿ 5 ಮೆಗಾ ವ್ಯಾಟ್ ಸಾಮರ್ಥ್ಯದ ಪವನ ವಿದ್ಯುತ್ ಯೋಜನೆಗೆ ಒಂದರಂತೆ ಗಾಳಿ ಕಂಬಗಳು (ವಿಂಡ್ ಮಾಸ್ಟ್) ಅಳವಡಿಸಬೇಕು. ಅಳತೆ ವಿವರಗಳನ್ನು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮತಕ್ಕೆ ಸಲ್ಲಿಸುವುದು.

| ಗಾಳಿ ಶಕ್ತಿ ವಿದ್ಯುತ್ತಿನ ದೂರ ಸಾಮರ್ಥ್ಯ | 5 ಮೆಗಾವ್ಯಾಟ್ ಗಾಳಿ ಯೋಜನೆಯಲ್ಲಿ ಸಾಧಾರಣ ಗಾಳಿ ಶಕ್ತಿ ವಿದ್ಯುತ್ತಿನ ಸಂಖ್ಯೆ | ಹಾಕಬೇಕಾಗಿರುವ ಗಾಳಿ ಕಂಬ (ವಿಂಡ್ ಮಾಸ್ಟ್‌ಗಳ ಸಂಖ್ಯೆ) |
|---|---|---|
| ➢ 200 ಕಿ.ವ್ಯಾ. ನಿಂದ 300 ಕಿ.ವ್ಯಾ. | 18 | 1 |
| ➢ 300 ಕಿ.ವ್ಯಾ. ನಿಂದ 500 ಕಿ.ವ್ಯಾ. | 15 | 1 |
| ➢ 500 ಕಿ.ವ್ಯಾ. ನಿಂದ 750 ಕಿ.ವ್ಯಾ. | 12 | 1 |
| ➢ 750 ಕಿ.ವ್ಯಾ. ನಿಂದ 1000 ಕಿ.ವ್ಯಾ. | 8 ರಿಂದ 10 | 1 |

5. ಯೋಜನೆಯ ವಿವಿಧ ಹಂತದ ಚಟುವಟಿಕೆಗಳು ಹಾಗೂ ಯೋಜನೆಗಳಿಂದ ಪ್ರಾರಂಭದ ಹಂತದ ತನಕ ವಿವಿಧ ಮೈಲುಗಲ್ಲುಗಳನ್ನು ತೋರಿಸಿದ ಪರ್ಟ್ ನಕ್ಷೆಯನ್ನು ತಯಾರಿಸಿ ಮೇಲುಸ್ತುವಾರಿಗಾಗಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಸಲ್ಲಿಸಬೇಕು.

6. ಎಲ್ಲೆಲ್ಲಿ ಶಾಸನಬದ್ಧ ಅನುಮೋದನೆ ಅವಶ್ಯಕತೆಯಿದೆಯೋ ಅಂದರೆ ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ/ಕಂದಾಯ/ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳ ಮತ್ತು ಇತರ ಸಂಬಂಧಿತ ಇಲಾಖೆಗಳಿಂದ ಅನುಮೋದನೆಯನ್ನು ಹಂಚಿಕೆದಾರರು ಪಡೆದುಕೊಳ್ಳತಕ್ಕದ್ದು.

7. ಅಭಿವೃದ್ಧಿದಾರರು ಸಂಬಂಧಿಸಿದ ವಿದ್ಯುತ್ ಸರಬರಾಜು ಕಂಪನಿಯೊಂದಿಗೆ/ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ನೀತಿ ನಿಯಮಗಳಿಗನುಗುಣವಾಗಿ ವೀಲಿಂಗ್ ಮತ್ತು ಬ್ಯಾಂಕಿಂಗ್/ವಿದ್ಯುತ್ ಖರೀದಿ ಒಡಂಬಡಿಕೆ ಮಾಡಿಕೊಳ್ಳಲು ಅನುಮತಿಸಲಾಗಿದೆ.

8. ಕಾಲ ಕಾಲಕ್ಕೆ ಇರುವ ನೀತಿ ನಿಯಮಗಳಿಗೆ ಅನುಗುಣವಾಗಿ ಯಂತ್ರೋಪಕರಣಗಳಿಗೆ ಪ್ರವೇಶ ತೆರಿಗೆಯಿಂದ ವಿನಾಯಿತಿ ನೀಡಲಾಗಿದೆ.

9. ಯೋಜನೆಯನ್ನು ತ್ವರಿತವಾಗಿ ಅನುಷ್ಠಾನ ಮಾಡಲು ಅನುವಾಗುವಂತೆ ರಾಜ್ಯ ಮತ್ತು ಜಿಲ್ಲಾ ಮಟ್ಟದ ಸರ್ಕಾರಿ ಅಧಿಕಾರಿಗಳು ಸಹಕರಿಸುವಂತೆ ವಿನಂತಿಸಲಾಗಿದೆ.

10. ಸದರಿ ಪವನ ವಿದ್ಯುತ್ ಯೋಜನೆಗಾಗಿ ಇಂಧನ ಇಲಾಖೆಯಿಂದ ಜಮೀನನ್ನು ಹಂಚಿಕೆ ಮಾಡಲಾಗುವುದಿಲ್ಲ ಹಾಗೂ ಈ ಹಂಚಿಕೆ ಆದೇಶವು ಪವನ ವಿದ್ಯುತ್ ಯೋಜನೆಯ ಸಾಮರ್ಥ್ಯದ ಹಂಚಿಕೆ ಮಾತ್ರ ಸೀಮಿತವಾಗಿದೆ ಹಾಗೂ ಅಭಿವೃದ್ಧಿದಾರರಿಗೆ ಯೋಜನೆಯ ಜಾಗದಲ್ಲಿಯ ಖನಿಜ ಸಂಪತ್ತು ಹಾಗೂ ಭೂಮಿಯ ಬಗ್ಗೆ ಯಾವುದೇ ಹಕ್ಕು ಇರುವುದಿಲ್ಲ ಎಂಬುದನ್ನು ಮನಗಾಣತಕ್ಕದ್ದು.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಸ್.ಜಿ. ಸಂಪತ್ ಕುಮಾರ್)**

ಪಿ.ಆರ್. 362 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ** : ಜಲಸಂಪನ್ಮೂಲ ಇಲಾಖೆಯಲ್ಲಿನ ವಿಶ್ವ ಬ್ಯಾಂಕ್ ಯೋಜನೆ ಶಾಖೆಯ ಹೆಸರನ್ನು ಮರುಪದನಾಮೀಕರಿಸುವ ಬಗ್ಗೆ :–

**ಓದಲಾಗಿದೆ :** 1) ಅನಧಿಕೃತ ಟಿಪ್ಪಣಿ ಸಂಖ್ಯೆ : ಜಸಂಇ 110 ಸೇಅವಿ 2009, ದಿನಾಂಕ 26–10–2009

2) ಅನಧಿಕೃತ ಟಿಪ್ಪಣಿ ಸಂಖ್ಯೆ : ಜಸಂಇ 151 ವಿಬ್ಯಾಇ 2009, ದಿನಾಂಕ 29–12–2009

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ (1) ಮತ್ತು (2) ರಲ್ಲಿ ಓದಲಾದ ಜಲಸಂಪನ್ಮೂಲ ಇಲಾಖೆಯ ಅನಧಿಕೃತ ಟಿಪ್ಪಣಿಗಳಲ್ಲಿ ಇಲಾಖೆಯಲ್ಲಿ ವಿಶ್ವಬ್ಯಾಂಕ್ ಯೋಜನೆ ಶಾಖೆಯು ತಾತ್ಕಾಲಿಕ ಶಾಖೆಯಾಗಿದ್ದು ಈ ಶಾಖೆಯಲ್ಲಿ ಬಹುಪಾಲು ಎಲ್ಲಾ ಬೃಹತ್ ನೀರಾವರಿ ಯೋಜನೆಗಳ ವಿಷಯಗಳನ್ನು ನಿರ್ವಹಿಸುತ್ತಿದ್ದು ಹಾಗೂ ಈ ಯೋಜನೆಗಳ ಕ್ಷಿಪ್ರ ಅನುಷ್ಠಾನದ ನಿಟ್ಟಿನಲ್ಲಿ ಬಾಹ್ಯ ನೆರವನ್ನು ಪಡೆಯುವ ಸಲುವಾಗಿ ಸರ್ಕಾರದ ಮಟ್ಟದಲ್ಲಿ ಪರಿಶೀಲಿಸುತ್ತಿರುವುದರಿಂದ ಈ ಶಾಖೆಯ ಹೆಸರನ್ನು ವಿಶ್ವಬ್ಯಾಂಕ್ ಯೋಜನೆ ಶಾಖೆಯೆಂದು ನಾಮಕರಣಗೊಳಿಸಲಾಗಿತ್ತು. ಈಗ ಈ ಶಾಖೆಯಲ್ಲಿ ಕೇವಲ ರಾಷ್ಟ್ರೀಯ ಜಲವಿಜ್ಞಾನ ಯೋಜನೆ ಮತ್ತು ಈಗಿನ ಜಲವಿಜ್ಞಾನ ಯೋಜನೆ ಹಂತ 2 ಕ್ಕೆ ಅಲ್ಪ ಮಾತ್ರದಲ್ಲಿ ವಿಶ್ವಬ್ಯಾಂಕ್ ಆರ್ಥಿಕ ನೆರವನ್ನು ಪಡಿದಿದ್ದು ಈ ಯೋಜನೆಗಳು ಇನ್ನು 2 ವರ್ಷಗಳಲ್ಲಿ ಕೊನೆಗೊಳ್ಳುತ್ತಿದ್ದು, ವಿಶ್ವಬ್ಯಾಂಕ್ ವಿಷಯಕ್ಕೆ ಸಂಬಂಧಿಸಿದಂತೆ ಈ ಶಾಖೆಯಲ್ಲಿ ಯಾವುದೇ ಪ್ರಸ್ತಾವನೆಗಳಿಲ್ಲ.

ಆದರೆ ಈ ಶಾಖೆಯಲ್ಲಿ ಕೃಷ್ಣಾ ಮೇಲ್ದಂಡೆ ಯೋಜನೆಯನ್ನು ಹೊರತುಪಡಿಸಿ ಕರ್ನಾಟಕ ನೀರಾವರಿ ನಿಗಮದಡಿ ಕೃಷ್ಣಾ ಕಣಿವೆಯ 28 ನೀರಾವರಿ ಯೋಜನೆಗಳನ್ನು, ಜಲಸಂಪನ್ಮೂಲ ಅಭಿವೃದ್ಧಿ ಸಂಸ್ಥೆಯ ಸರ್ವೆಕ್ಷಣಾ ಯೋಜನೆಗಳ ವಿಷಯಗಳನ್ನು ಮಹದಾಯಿ ತಿರುವು ಯೋಜನೆ, ಪಶ್ಚಿಮಕ್ಕೆ ಹರಿಯುವ ನದಿಗಳ ಯೋಜನೆ, ರಾಜ್ಯ ಜಲ ನೀತಿ ಸಣ್ಣ ನೀರಾವರಿ ಇಲಾಖೆಯಿಂದ ಜಲಸಂಪನ್ಮೂಲ ಇಲಾಖೆಗೆ ಹಸ್ತಾಂತರಗೊಂಡ ಯೋಜನೆಗಳನ್ನು ನಿರ್ವಹಿಸಲಾಗುತ್ತಿದೆಯೆಂದು ಹಾಗೂ ಇದಲ್ಲದೇ ವಿಧಾನಮಂಡಲದ ಭರವಸೆಗಳ ಸಮಿತಿಗೆ ಸಮನ್ವಯ ಶಾಖೆಯಾಗಿ ಕರ್ತವ್ಯ ನಿರ್ವಹಿಸುತ್ತಿರುವುದರಿಂದ ಈ ಶಾಖೆಯನ್ನು ಮುಂದುವರಿಸುವಂತೆ ಹಾಗೂ ಶಾಖೆಯ ಹೆಸರನ್ನು ವಿಶ್ವಬ್ಯಾಂಕ್ ಯೋಜನೆ ಶಾಖೆ ಬದಲಾಗಿ ತಾಂತ್ರಿಕ–4 ಎಂದು ಪುನರ್ ನಾಮಕರಣ ಮಾಡುವಂತೆ ಕೋರಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 556 ಸಅಸೇ 2009, ಬೆಂಗಳೂರು, ದಿನಾಂಕ 04–02–2010**

ಪ್ರಸ್ತಾವನೆಯಲ್ಲಿ ಕೂಲಂಕುಷವಾಗಿ ಪರಿಶೀಲಿಸಿ, ಜಲಸಂಪನ್ಮೂಲ ಇಲಾಖೆಯಲ್ಲಿನ **"ವಿಶ್ವ ಬ್ಯಾಂಕ್ ಯೋಜನೆ"** ಶಾಖೆ ಹೆಸರನ್ನು ತಕ್ಷಣದಿಂದ ಜಾರಿಗೆ ಬರವಂತೆ **"ತಾಂತ್ರಿಕ–4"** ಎಂದು ಮರುಪದನಾಮೀಕರಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಎಂ. ಎಸ್. ಶಿವರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣ ಇಲಾಖೆ (ಸೇವೆಗಳು–3)

ಪಿ.ಆರ್. 363

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಸ್ವಾತಂತ್ರ್ಯ ಹೋರಾಟಗಾರರಿಗೆ ನೀಡುತ್ತಿರುವ ರಾಜ್ಯ ಗೌರವಧನವನ್ನು ಹೆಚ್ಚಿಸುವ ಬಗ್ಗೆ–ಆದೇಶ

**ಓದಲಾಗಿದೆ :**
1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 313 ಪಿಎಫ್ಎಸ್ 86, ದಿನಾಂಕ 16–05–1986
2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 1040 ಪಿಎಫ್ಎಸ್ 87, ದಿನಾಂಕ 31–08–1987
3) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 476 ಪಿಎಫ್ಎಸ್ 89, ದಿನಾಂಕ 30–06–1989
4) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 40 ಪಿಎಫ್ಎಸ್ 91, ದಿನಾಂಕ 11–07–1991
5) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 47 ಪಿಎಫ್ಜಿ 92, ದಿನಾಂಕ 08–10–1992
6) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 181 ಪಿಎಫ್ಜಿ 95, ದಿನಾಂಕ 08–08–1997
7) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 222 ಪಿಎಫ್ಜಿ 98, ದಿನಾಂಕ 23–11–2000
8) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 16 ಪಿಎಫ್ಜಿ 04, ದಿನಾಂಕ 6–7–2005
9) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 16 ಪಿಎಫ್ಜಿ 04, ದಿನಾಂಕ 06–01–2006
10) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 30 ಪಿಎಫ್ಜಿ 06, ದಿನಾಂಕ 17–05–2007

**ಪ್ರಸ್ತಾವನೆ :**

ಮೇಲೆ (1)ರಿಂದ (9)ರವರೆಗೆ ಓದಲಾಗಿರುವ ಸರ್ಕಾರದ ಆದೇಶಗಳಲ್ಲಿ ಭಾರತ ದೇಶದ ಸ್ವಾತಂತ್ರಕ್ಕಾಗಿ ಸ್ಮರಣೀಯವಾಗಿ ಸೇವೆ ಸಲ್ಲಿಸಿದ ಹಾಗೂ ತ್ಯಾಗ ಮಾಡಿದ ಸ್ವಾತಂತ್ರ್ಯ ಹೋರಾಟಗಾರರಿಗೆ ರಾಜ್ಯ ಗೌರವಧನವನ್ನು ಕಾಲ ಕಾಲಕ್ಕೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.

ಮೇಲೆ (10)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಸ್ವಾತಂತ್ರ್ಯ ಹೋರಾಟಗಾರರಿಗೆ/ಕುಟುಂಬ ಪಿಂಚಣಿದಾರರಿಗೆ ರಾಜ್ಯ ಗೌರವಧನವನ್ನು ದಿನಾಂಕ 01–04–2007ರಿಂದ ಜಾರಿಗೆ ಬರುವಂತೆ ಮಾಸಿಕ ರೂ. 3,000/–ಗಳಿಗೆ ಹೆಚ್ಚಿಸಿ ಆದೇಶ ಹೊರಡಿಸಲಾಗಿದೆ.

ಪ್ರಸ್ತುತ ರಾಜ್ಯ ವ್ಯಾಪ್ತಿ ಸ್ವಾತಂತ್ರ್ಯ ಹೋರಾಟಗಾರರ ಸಂಘಟನೆಗಳು ಸರ್ಕಾರಕ್ಕೆ ಮನವಿಗಳನ್ನು ಸಲ್ಲಿಸಿ, ಹಾಲಿ ನೀಡುತ್ತಿರುವ ಸ್ವಾತಂತ್ರ್ಯ ಹೋರಾಟಗಾರರ ಗೌರವಧನವನ್ನು ಹೆಚ್ಚಿಸಬೇಕೆಂದು ಸರ್ಕಾರವನ್ನು ಕೋರಿದ್ದವು. ಸ್ವಾತಂತ್ರ್ಯ ಹೋರಾಟಗಾರರ ಮನವಿಗಳನ್ನು ಪರಿಶೀಲಿಸಿದ ಸರ್ಕಾರವು ಸ್ವಾತಂತ್ರ್ಯ ಹೋರಾಟಗಾರರ ರಾಜ್ಯ ಗೌರವಧನವನ್ನು ರೂ. 3,000/–ಗಳಿಂದ ರೂ. 4000/–ಗಳಿಗೆ ಹೆಚ್ಚಿಸಲು ತೀರ್ಮಾನಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 65 ಪಿಎಫ್ಜಿ 2009, ಬೆಂಗಳೂರು, ದಿನಾಂಕ 5–02–2010**

ಸ್ವಾತಂತ್ರ್ಯ ಹೋರಾಟಗಾರರಿಗೆ/ಸ್ವಾತಂತ್ರ್ಯ ಹೋರಾಟಗಾರರ ಕುಟುಂಬ ಪಿಂಚಣಿದಾರರಿಗೆ ಹಾಲಿ ನೀಡುತ್ತಿರುವ ಸ್ವಾತಂತ್ರ್ಯ ಹೋರಾಟಗಾರರ ರಾಜ್ಯ ಗೌರವಧನವನ್ನು ಆಗಸ್ಟ್ 2009 ರಿಂದ ಜಾರಿಗೆ ಬರುವಂತೆ ಮಾಸಿಕ ರೂ. 3,000/–ಗಳಿಂದ (ಮೂರು ಸಾವಿರ ರೂಪಾಯಿಗಳು ಮಾತ್ರ) ರೂ. 4,000/–ಗಳಿಗೆ (ನಾಲ್ಕು ಸಾವಿರ ರೂಪಾಯಿಗಳು ಮಾತ್ರ) ಹೆಚ್ಚಿಸಿ ಸರ್ಕಾರವು ಆದೇಶಿಸಿದೆ.

ಈ ವೆಚ್ಚವನ್ನು ಆಯವ್ಯಯದ ಲೆಕ್ಕ ಶೀರ್ಷಿಕೆ 2235–60–107–0–01–251 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ : ಆಇ 1199 ವೆಚ್ಚ–12/09, ದಿನಾಂಕ 20–10–2009 ರಲ್ಲಿ ನೀಡಿರುವ ಸಹಮತಿಯೊಂದಿಗೆ, ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**(ಹೆಚ್. ಜಯರಾಮ್)**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ)
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಆಸು–ರಾಜಕೀಯ ವಿಶ್ರಾಂತಿ ವೇತನ–1)

ಪಿ.ಆರ್. 364

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ :** ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಯ ಯೋಜನಾ ಸಮನ್ವಯಾಧಿಕಾರಿ ಹಾಗೂ ಪೂರಕ ಹುದ್ದೆ ಮತ್ತು ಬಿ.ಎಂ.ಐ.ಸಿ.ಪಿ. ಶಾಖೆಯ ಹುದ್ದೆಗಳನ್ನು ಮುಂದುವರಿಸುವ ಬಗ್ಗೆ :–

**ಓದಲಾಗಿದೆ :** 1) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 44 ಸಅಸೇ 2008, ದಿನಾಂಕ 18–03–2008

2) ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 148 ಸಅಸೇ 2008, ದಿನಾಂಕ 03–12–2008

3) ಅನಧಿಕೃತ ಟಿಪ್ಪಣಿ ಸಂಖ್ಯೆ : ಲೋಇ 5 ಸಿಆರ್‌ಎಂ 2008, ದಿನಾಂಕ 22–01–2010

**ಪ್ರಸ್ತಾವನೆ :**

ಮೇಲೆ ಕ್ರಮ ಸಂಖ್ಯೆ 2 ರಲ್ಲಿ ಓದಲಾದ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಗೆ ಸಂಬಂಧಿಸಿದಂತೆ ತಾತ್ಕಾಲಿಕವಾಗಿ ಸೃಜಿದಲಾದ ಯೋಜನಾ ಸಮನ್ವಯಾಧಿಕಾರಿ ಹಾಗೂ ಪೂರಕ ಹುದ್ದೆಗಳನ್ನು ದಿನಾಂಕ 13–12–2008 ರಿಂದ ಒಂದು ವರ್ಷದವರೆಗೆ ಮುಂದುವರಿಸಲಾಗಿದೆ ಹಾಗೂ ಬಿ.ಎಂ.ಐ.ಸಿ.ಪಿ. ಶಾಖೆಗೆ 5 ಹುದ್ದೆಗಳನ್ನು ತಾತ್ಕಾಲಿಕವಾಗಿ ಸೃಜಿಸಲಾಗಿದೆ. ಮೇಲೆ ಕ್ರಮ ಸಂಖ್ಯೆ 3 ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಚರ್ ಕಾರಿಡಾರ್ ಯೋಜನೆಗೆ ಸಂಬಂಧಪಟ್ಟಂತೆ ಹಲವಾರು ಪ್ರಕರಣಗಳು ಉಚ್ಛ ನ್ಯಾಯಾಲಯ ಹಾಗೂ ಸರ್ವೋಚ್ಛ ನ್ಯಾಯಾಲಯಗಳಲ್ಲಿ ಬಾಕಿಯಿದೆ. ಈ ಬಾಕಿ ಇರುವ ಪ್ರಕರಣಗಳನ್ನು ತ್ವರಿತವಾಗಿ ಇತ್ಯರ್ಥಗೊಳಿಸಲು ಯೋಜನಾ ಸಮನ್ವಯಾಧಿಕಾರಿ ಹಾಗೂ ಪೂರಕ ಸಿಬ್ಬಂದಿ ಮತ್ತು ಬಿ.ಎಂ.ಐ.ಸಿ.ಪಿ. ಶಾಖೆಯ ಹುದ್ದೆಗಳನ್ನು ಮುಂದುವರಿಸುವ ಅವಶ್ಯಕತೆ ಇದೆಯೆಂದು ಆದ್ದರಿಂದ ಈ ಹುದ್ದೆಗಳನ್ನು ಇನ್ನು ಮೂರು ವರ್ಷಗಳ ಅವಧಿಗೆ ಮುಂದುವರಿಸುವಂತೆ ಕೋರಲಾಗಿದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ : ಸಿಆಸುಇ 70 ಸಅಸೇ 2010, ಬೆಂಗಳೂರು, ದಿನಾಂಕ 4–02–2010**

ಕರ್ನಾಟಕ ಸರ್ಕಾರ ಸಚಿವಾಲಯದ ಲೋಕೋಪೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ಬೆಂಗಳೂರು–ಮೈಸೂರು ಇನ್‌ಫ್ರಾಸ್ಟ್ರಕ್ಟರ್ ಕಾರಿಡಾರ್ ಯೋಜನೆಗೆ ಸಂಬಂಧಿಸಿದಂತೆ ಈ ಕೆಳಕಂಡ ಹುದ್ದೆಗಳನ್ನು ದಿನಾಂಕ 3–12–2009 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರಿಸಲಾಗಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ |
|---|---|---|
| 1) | ಯೋಜನಾ ಸಮನ್ವಯಾಧಿಕಾರಿ ಬಿಎಂಐಸಿಪಿ (ವೇತನ ಶ್ರೇಣಿ ರಹಿತ) | 1 ಹುದ್ದೆ |
| 2) | ಶೀಘ್ರಲಿಪಿಗಾರ | 1 ಹುದ್ದೆ |
| 3) | ಕಿರಿಯ ಸಹಾಯಕ | 1 ಹುದ್ದೆ |
| 4) | ದಲಾಯತ್ | 1 ಹುದ್ದೆ |
| 5) | ವಾಹನ ಚಾಲಕ | 1 ಹುದ್ದೆ |

ಬಿ.ಎಂ.ಐ.ಸಿ.ಪಿ. ಶಾಖೆ

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | |
|---|---|---|---|
| 1) | ಶಾಖಾಧಿಕಾರಿ | 1 ಹುದ್ದೆ | ಸದರಿ ಹುದ್ದೆಗಳ ಪ್ರತಿ ನಿಯೋಜನೆ ಮೇಲೆ (Redeployment) ತುಂಬುವುದು |
| 2) | ಹಿರಿಯ ಸಹಾಯಕ | 1 ಹುದ್ದೆ | |
| 3) | ಸಹಾಯಕ | 1 ಹುದ್ದೆ | |
| 4) | ಕಿರಿಯ ಸಹಾಯಕ | 1 ಹುದ್ದೆ | |
| 5) | ದಲಾಯತ್ | 1 ಹುದ್ದೆ | |

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ : ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ 10-07-1996 ರಲ್ಲಿ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಆರ್ಥಿಕ ಇಲಾಖೆ ಸಹಮತಿ ನೀಡಿದ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**(ಎಂ. ಎಸ್. ಶಿವರಾಮ್)**

ಪಿ.ಆರ್. 365 ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಪ್ರಾಚ್ಯವಸ್ತು. ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಯ 2009-10ನೇ ಸಾಲಿನ ಕ್ರಿಯಾಯೋಜನೆಯನ್ನು ಪರಿಷ್ಕರಿಸಿ ಆದೇಶಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ನಡವಳಿಗಳ ಸಂಖ್ಯೆ: ಕಸಂವಾಪ್ರ 74 ಸ್ವೀಮರ 2009 ದಿನಾಂಕ 11-05-2009.

2. ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಇವರ ಪತ್ರ ಸಂಖ್ಯೆ ಆಪ್ರಾಸಂಪ / ಕ್ರಿಯಾಯೋಜನೆ / 2009-10/403, ದಿನಾಂಕ 21-12-09.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ 11-05-2009ರ ನಡವಳಿಗಳಲ್ಲಿ ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆಗೆ ಕ್ರಿಯಾಯೋಜನೆ ಅನುಮೋದಿಸಿ ಹೊರಡಿಸಲಾಗಿದೆ. ಸದರಿ ಕ್ರಿಯಾಯೋಜನೆಯಂತೆ ಪಾರಂಪರಿಕ ಕಟ್ಟಡಗಳ ರಕ್ಷಣೆ ಮತ್ತು ಸಂರಕ್ಷಣೆ ಶೀರ್ಷಿಕೆಯಡಿಯಲ್ಲಿ ಶ್ರೀರಂಗಪಟ್ಟಣದಲ್ಲಿರುವ ಮದ್ದಿನ ಮನೆಗಳ ಸ್ವಚ್ಛತಾ ಕೆಲಸಕ್ಕಾಗಿ ರೂ. 3.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಲಾಗಿದೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ 21-12-2009 ರ ಪತ್ರದಲ್ಲಿ ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆರವರು ಪ್ರಸ್ತಾವನೆ ಸಲ್ಲಿಸಿ, ಪಾರಂಪರಿಕ ಕಟ್ಟಡಗಳ ರಕ್ಷಣೆ ಮತ್ತು ಸಂರಕ್ಷಣೆ ಶೀರ್ಷಿಕೆಯಡಿಯಲ್ಲಿ ಶ್ರೀರಂಗಪಟ್ಟಣದಲ್ಲಿರುವ ಮದ್ದಿನ ಮನೆಗಳ ಸ್ವಚ್ಛತಾ ಕೆಲಸಕ್ಕಾಗಿ ರೂ. 3.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಿದ್ದು, ಮದ್ದಿನ ಮನೆಗಳ ಸ್ವಚ್ಛತಾ ಕಾರ್ಯಗಳನ್ನು ಈಗ ಮಾಡಿದಲ್ಲಿ ಸಂರಕ್ಷಣಾ ಕಾಮಗಾರಿಗಳನ್ನು ಕೈಗೊಳ್ಳುವಾಗ ಪುನಃ ಮಾಡಬೇಕಾದ ಸಂದರ್ಭ ಬರುವುದರಿಂದ ಸಂರಕ್ಷಣಾ ಕಾರ್ಯವನ್ನು ಕೈಗೊಳ್ಳುವ ಮುನ್ನ, ಸ್ವಚ್ಛತಾ ಕಾರ್ಯವನ್ನು ನಿರ್ವಹಿಸಲಾಗುವುದೆಂದು ತಿಳಿಸಿ ಕ್ರಿಯಾಯೋಜನೆಯಲ್ಲಿ ನಮೂದಿಸಿರುವ ಮದ್ದಿನ ಮನೆಯ ಸ್ವಚ್ಛತಾ ಕಾರ್ಯವನ್ನು ರದ್ದುಗೊಳಿಸಿ ಇದಕ್ಕೆ ಬದಲಾಗಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲು ಅನುಮೋದನೆ ನೀಡುವಂತೆ ಹಾಗೂ ಅನುದಾನ ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

| ಕ್ರ.ಸಂ. | ಕಾಮಗಾರಿಯ ವಿವರ | ಮೊತ್ತ |
|---|---|---|
| 1 | ಶ್ರೀರಂಗಪಟ್ಟಣ ಪರಂಪರೆ ಮಾಲಿಕೆಯನ್ನು ಆಂಗ್ಲ ಭಾಷೆಯಲ್ಲಿ ಮರು ಮುದ್ರಿಸುವುದಕ್ಕಾಗಿ | ರೂ. 1.00 ಲಕ್ಷ |
| 2 | 2010ನೇ ಸಾಲಿನ ಪಾರಂಪರಿಕ ಕ್ಯಾಲೆಂಡರ್‌ಗಳ ಮುದ್ರಣಕ್ಕಾಗಿ | ರೂ. 1.00 ಲಕ್ಷ |
| 3 | ಮೈಸೂರು ಪರಂಪರೆ ಮಾಲಿಕೆಯನ್ನು ಕನ್ನಡ ಭಾಷೆಯಲ್ಲಿ ಪ್ರಕಟಿಸುವುದಕ್ಕಾಗಿ | ರೂ. 1.00 ಲಕ್ಷ |
| | ಒಟ್ಟು | ರೂ. 3.00 ಲಕ್ಷ |

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ..

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 181 ಕೆಎಂಯು 2009, ಬೆಂಗಳೂರು, ದಿನಾಂಕ: 6ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ದಿನಾಂಕ 11–05–2009ರ ಸರ್ಕಾರಿ ಆದೇಶ ಸಂಖ್ಯೆ ಕಸಂವಾಪ್ರ 74 ಸ್ವೀಮರ 2009 ರಲ್ಲಿ ಪಾರಂಪರಿಕ ಕಟ್ಟಡಗಳ ರಕ್ಷಣೆ ಮತ್ತು ಸಂರಕ್ಷಣೆ ಶೀರ್ಷಿಕೆಯಡಿಯಲ್ಲಿ ಶ್ರೀರಂಗಪಟ್ಟಣದಲ್ಲಿರುವ ಮದ್ದಿನ ಮನೆಗಳ ಸ್ವಚ್ಛತಾ ಕೆಲಸಕ್ಕಾಗಿ ರೂ. 3.00 ಲಕ್ಷಗಳ ಆಯವ್ಯಯ ಅವಕಾಶ ಕಲ್ಪಿಸಿರುವುದನ್ನು ಪರಿಷ್ಕರಿಸಿ.

ಈ ಕೆಳಕಂಡ ಕಾರ್ಯಕ್ರಮಗಳನ್ನು ಕೈಗೆತ್ತಿಕೊಳ್ಳಲು ಅನುಮೋದನೆ ನೀಡಲಾಗಿದೆ:–

| ಕ್ರ.ಸಂ. | ಕಾಮಗಾರಿಯ ವಿವರ | ಮೊತ್ತ |
|---|---|---|
| 1 | ಶ್ರೀರಂಗಪಟ್ಟಣ ಪರಂಪರೆ ಮಾಲಿಕೆಯನ್ನು ಆಂಗ್ಲ ಭಾಷೆಯಲ್ಲಿ ಮರು ಮುದ್ರಿಸುವುದಕ್ಕಾಗಿ | ರೂ. 1.00 ಲಕ್ಷ |
| 2 | 2010ನೇ ಸಾಲಿನ ಪಾರಂಪರಿಕ ಕ್ಯಾಲೆಂಡರ್‌ಗಳ ಮುದ್ರಣಕ್ಕಾಗಿ | ರೂ. 1.00 ಲಕ್ಷ |
| 3 | ಮೈಸೂರು ಪರಂಪರೆ ಮಾಲಿಕೆಯನ್ನು ಕನ್ನಡ ಭಾಷೆಯಲ್ಲಿ ಪ್ರಕಟಿಸುವುದಕ್ಕಾಗಿ | ರೂ. 1.00 ಲಕ್ಷ |
| | ಒಟ್ಟು | ರೂ. 3.00 ಲಕ್ಷ |

2. ಮೇಲ್ಕಂಡ ಪರಿಸ್ಕೃತ 3 ಕಾಮಗಾರಿಗಳನ್ನು ಕೈಗೊಳ್ಳಲು ಒಟ್ಟು ರೂ. 3.00 ಲಕ್ಷಗಳನ್ನು (ರೂಪಾಯಿ ಮೂರು ಲಕ್ಷಗಳು ಮಾತ್ರ) ಆಯುಕ್ತರು, ಪ್ರಾಚ್ಯವಸ್ತು, ಸಂಗ್ರಹಾಲಯಗಳು ಮತ್ತು ಪರಂಪರೆ ಇಲಾಖೆ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಿದೆ.
3. ಈ ಮೊತ್ತವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–21–(ಯೋಜನೆ) 059 (ಇತರೆ ವೆಚ್ಚಗಳು) ಅಡಿಯಲ್ಲಿ ಭರಿಸತಕ್ಕದ್ದು.
4. ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10–7–96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.407/10

**(ಎಂ.ಕೆ. ಧರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

**ವಿಷಯ :** ಚಿತ್ರದುರ್ಗ ನಗರದಲ್ಲಿನ ದಿವಂಗತ ನಿಜಲಿಂಗಪ್ಪ ಅವರ ಮನೆಯನ್ನು ಸ್ಮಾರಕವನ್ನಾಗಿ ಮಾಡಲು ಅನುದಾನ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:** 1. ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಇವರ ಪತ್ರ ಸಂಖ್ಯೆ: ಆರ್.ಕೆ.ಸಿ.ಆರ್.–7 : 2009–10 ದಿನಾಂಕ 24–07–2009.

2. ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಕಸನಿ : 18 : ಸ್ಮಾರಕ : 2008–09, ದಿನಾಂಕ: 03–09–09.

**ಪ್ರಸ್ತಾವನೆ :**

ಮೇಲೆ (1) ರಲ್ಲಿ ಓದಲಾದ ದಿನಾಂಕ 24–07–2009ರ ಪತ್ರದಲ್ಲಿ ಅಪರ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಇವರು ಚಿತ್ರದುರ್ಗ ನಗರದಲ್ಲಿನ ದಿವಂಗತ ನಿಜಲಿಂಗಪ್ಪ ಅವರ ಮನೆಯನ್ನು ಸ್ಮಾರಕವನ್ನಾಗಿ ಮಾಡಲು ಯೋಜನೆಯನ್ನು ರೂಪಿಸಿ ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ವಿಭಾಗ, ಚಿತ್ರದುರ್ಗ ಇವರಿಂದ ನೀಲಿನಕ್ಷೆ ಮತ್ತು ವಿವರವಾದ ಅಂದಾಜು ಪಟ್ಟಿಯನ್ನು ರೂ. 152.36 ಲಕ್ಷಗಳಿಗೆ ತಯಾರಿಸಿ ಸರ್ಕಾರದ ಅವಗಾಹನೆಗೆ ಸಲ್ಲಿಸಿರುತ್ತಾರೆ.

ಮೇಲೆ (2) ರಲ್ಲಿ ಓದಲಾದ ದಿನಾಂಕ 03–09–2009ರ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರು 2009–10ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಸನ್ಮಾನ್ಯ ಮುಖ್ಯಮಂತ್ರಿಗಳು ಮೇಲ್ಕಂಡ ಯೋಜನೆಯನ್ನು ಅನುಷ್ಠಾನಗೊಳಿಸಲು ರೂ. 100.00 ಲಕ್ಷಗಳ ಅನುದಾನವನ್ನು ಘೋಷಣೆ ಮಾಡಿರುತ್ತಾರೆ. ಚಿತ್ರದುರ್ಗ ನಗರದ ವಿ.ಪಿ. ಬಡಾವಣೆಯಲ್ಲಿರುವ ಮಾಜಿ ಮುಖ್ಯಮಂತ್ರಿಗಳಾದ ದಿವಂಗತ ಶ್ರೀ ಎಸ್. ನಿಜಲಿಂಗಪ್ಪನವರ ಮನೆಯನ್ನು ಸ್ಮಾರಕವನ್ನಾಗಿ ಮಾಡಲು ಸರ್ಕಾರವು ನಿರ್ಧರಿಸಿರುವ ಕಾರಣ ಸದರಿ ಯೋಜನೆಗೆ ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಇವರಿಂದ ಅಂದಾಜು ಪಟ್ಟಿ ಹಾಗೂ ನೀಲಿ ನಕಾಶೆಯನ್ನು ಸರ್ಕಾರಕ್ಕೆ ಸಲ್ಲಿಸಿದ್ದು ಮೇಲ್ಕಂಡ ಯೋಜನೆಯನ್ನು ಅನುಷ್ಠಾನಗೊಳಿಸುವ ಹಿನ್ನೆಲೆಯಲ್ಲಿ ರೂ. 100.00 ಲಕ್ಷಗಳನ್ನು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಇವರಿಗೆ ಬಿಡುಗಡೆ ಮಾಡಿ ಆದೇಶ ಹೊರಡಿಸಲು ವಿನಂತಿಸಿರುತ್ತಾರೆ.

ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ 4202–04–800–1–08–132 (ಯೋಜನೆ) ಕ್ರಿಯೋಸಂ 39 2009–10ನೇ ಸಾಲಿನ ಗಡಿ ಭಾಗಗಳಲ್ಲಿ ಸುವರ್ಣ ಸೌಧ ನಿರ್ಮಾಣ ಲೆಕ್ಕ ಶೀರ್ಷಿಕೆಯಿಂದ ಭರಿಸಬಹುದಾಗಿದೆಯೆಂದು ತಿಳಿಸಿರುತ್ತಾರೆ

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸಿರುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಕಸಂವಾಪ್ರ 68 ಸ್ಮಾಪ್ರನಿ 2009, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2010.**

ಚಿತ್ರದುರ್ಗ ನಗರದಲ್ಲಿ ಚಿತ್ರದುರ್ಗ ನಗರದಲ್ಲಿನ ದಿವಂಗತ ನಿಜಲಿಂಗಪ್ಪ ಅವರ ಮನೆಯನ್ನು ಸ್ಮಾರಕವನ್ನಾಗಿ ಮಾಡಲು ರೂ. 100.00 ಲಕ್ಷ (ನೂರು ಲಕ್ಷ ರೂಪಾಯಿಗಳು ಮಾತ್ರ) ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಇವರಿಗೆ ಬಿಡುಗಡೆ ಮಾಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ಇಲಾಖೆ, ಅವರಿಗೆ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ. ಹಾಗೂ ರೂ. 100.00 ಲಕ್ಷಗಳ ಮಿತಿಯಲ್ಲಿ ಕಾಮಗಾರಿ ಕೈಗೊಳ್ಳಲು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

1) ಕಾಮಗಾರಿಯ ಅಂದಾಜು ಪಟ್ಟಿಗೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಅನುಮೋದನೆಯನ್ನು ಪಡೆದು ಕಾಮಗಾರಿ ಕೈಗೊಳ್ಳುವುದು.
2) ಕಾಮಗಾರಿಯನ್ನು ಕೆ.ಟಿ.ಪಿ.ಪಿ. ಕಾಯ್ದೆ / ನಿಯಮಗಳಡಿಯಲ್ಲಿ ಟೆಂಡರ್ ಕರೆದು ಕಾಮಗಾರಿ ಕೈಗೊಳ್ಳುವುದು.
3) ಕಾಮಗಾರಿ ಕೈಗೊಂಡ ನಂತರ ಪ್ರಗತಿ ಆಧರಿಸಿ ಹಂತ ಹಂತವಾಗಿ ಅನುದಾನ ಬಿಡುಗಡೆ ಮಾಡುವುದು. ಅನುದಾನ ಉಪಯೋಗ ಪ್ರಮಾಣ ಪತ್ರ ಪಡೆಯುವುದು.
4) ಕಾಮಗಾರಿಯನ್ನು ಪೂರ್ಣಗೊಳಿಸಲು ಸಮಯ ನಿಗದಿಪಡಿಸಿಕೊಂಡು ಪೂರ್ಣಗೊಳಿಸುವುದು.
5) ಕಾಮಗಾರಿಯನ್ನು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ, ಇವರ ಮೇಲುಸ್ತುವಾರಿಯಲ್ಲಿ ಕೈಗೊಳ್ಳುವುದು.
6) ಕಾಮಗಾರಿಯ ಅಂದಾಜು ಪಟ್ಟಿಯನ್ನು ರೂ. 100.00 ಲಕ್ಷಗಳಿಗೆ ನಿಗದಿಪಡಿಸಿಕೊಳ್ಳುವುದು.

ಈ ಮೊತ್ತವನ್ನು ಲೆಕ್ಕ ಶೀರ್ಷಿಕೆ 4202–04–800–1–08–132 ಗಡಿ ಭಾಗಗಳಲ್ಲಿ ಸುವರ್ಣ ಸೌಧ ನಿರ್ಮಾಣದಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅ.ಟಿ. ಸಂ: 1117 ವೆಚ್ಚ–7/2009 ದಿನಾಂಕ: 10–12–2009ರ ಹಾಗೂ ಜನಶಕ್ತಿ ಮತು ಉದ್ಯೋಗ ವಿಭಾಗ ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆಯ ಅ.ಟಿ. ಸಂಖ್ಯೆ: ಯೋಇ 122/2009 ದಿನಾಂಕ: 12–1–2010ರಲ್ಲಿ ಸಹಮತಿ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.408/10

**(ಎಂ.ಕೆ. ಭರ್ಮರಾಜಪ್ಪ)**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ
(ಆಡಳಿತ ಕನ್ನಡ)

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಜಗದ್ಗುರು ಪಂಡಿತಾರಾಧ್ಯ ಸೇವಾ ಸಮಿತಿ ಶ್ರೀಶೈಲಂ ವತಿಯಿಂದ ಯಾತ್ರಿ ನಿವಾಸ ಕಟ್ಟಡ ನಿರ್ಮಾಣ ಉದ್ದೇಶಕ್ಕಾಗಿ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ :** ಮಾನ್ಯ ಮುಖ್ಯಮಂತ್ರಿಯವರ ಕಛೇರಿ ಟಿಪ್ಪಣಿ ಸಂಖ್ಯೆ: ಸಿಎಂ 77 ಜಿ.ಎಸ್‌ಡಿ. / 2010 ದಿನಾಂಕ: 04–02–2010.

**ಪ್ರಸ್ತಾವನೆ :**

ಮೇಲೆ ಓದಲಾದ ಟಿಪ್ಪಣಿ ದಿನಾಂಕ: 04–02–2010ರಲ್ಲಿ ಆಂಧ್ರಪ್ರದೇಶ, ಕರ್ನೂಲು ಜಿಲ್ಲೆ, ಆತ್ಮಕೂರು ಗ್ರಾಮದ ಶ್ರೀ ಜಗದ್ಗುರು ಪಂಡಿತಾರಾಧ್ಯ ಸೇವಾ ಸಮಿತಿ, ಶ್ರೀಶೈಲಂನ ವತಿಯಿಂದ ಯಾತ್ರಿ ನಿವಾಸ ನಿರ್ಮಾಣ ಉದ್ದೇಶಕ್ಕಾಗಿ ರೂ. 2.00 ಕೋಟಿ ಅನುದಾನವನ್ನು ಬಿಡುಗಡೆ ಮಾಡುವಂತೆ ಸೂಚಿಸಿರುತ್ತಾರೆ.

20–09–10ನೇ ಸಾಲಿನ ಆಯವ್ಯಯದಲ್ಲಿ ಮುಜರಾಯಿ ಇಲಾಖಾ ಲೆಕ್ಕ ಶೀರ್ಷಿಕೆ 2250–00–800–1–03–ದೇವಸ್ಥಾನಗಳು ಮತ್ತು ಇತರ ಧಾರ್ಮಿಕ ಸಂಸ್ಥೆಗಳು–200–ನಿರ್ವಹಣೆ (ಯೋಜನೇತರ) ರಡಿಯಲ್ಲಿ ಅನುದಾನ ಒದಗಿಸಲಾಗಿದ್ದು, ಅದರನ್ವಯ ಆಂಧ್ರಪ್ರದೇಶ, ಕರ್ನೂಲು ಜಿಲೆ, ಆತ್ಮಕೂರು ಗ್ರಾಮದ ಶ್ರೀ ಜಗದ್ಗುರು ಪಂಡಿತಾರಾಧ್ಯ ಸೇವಾ ಸಮಿತಿ, ಶ್ರೀಶೈಲಂ ವತಿಯಿಂದ ಯಾತ್ರಿ ನಿವಾಸ ನಿರ್ಮಾಣ ಉದ್ದೇಶಕ್ಕಾಗಿ ಅನುದಾನ ಮಂಜೂರು ಮಾಡಲು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 35 ಮುಅಬಿ 2010, ಬೆಂಗಳೂರು, ದಿನಾಂಕ: 5ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ 2009–10ನೇ ಸಾಲಿನ ಮುಜರಾಯಿ ಇಲಾಖಾ ಲೆಕ್ಕ ಶೀರ್ಷಿಕೆ 2250–00–800–1–03–ದೇವಸ್ಥಾನಗಳು ಮತ್ತು ಇತರೆ ಧಾರ್ಮಿಕ ಸಂಸ್ಥೆಗಳು–200–ನಿರ್ವಹಣೆ (ಯೋಜನೇತರ) ರಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ಪ್ರಸ್ತುತ ವರ್ಷದಲ್ಲಿ ರೂ. 2.00 ಕೋಟಿ (ಎರಡು ಕೋಟಿಗಳು ಮಾತ್ರ) ಗಳ ಅನುದಾನವನ್ನು ಆಂಧ್ರಪ್ರದೇಶ, ಕರ್ನೂಲು ಜಿಲ್ಲೆ, ಆತ್ಮಕೂರು ಗ್ರಾಮದ ಶ್ರೀ ಜಗದ್ಗುರು ಪಂಡಿತಾರಾಧ್ಯ ಸೇವಾ ಸಮಿತಿ ಶ್ರೀಶೈಲಂ ವತಿಯಿಂದ ಯಾತ್ರಿ ನಿವಾಸ ಕಟ್ಟಡ ನಿರ್ಮಾಣ ಉದ್ದೇಶಕ್ಕಾಗಿ ಬಿಡುಗಡೆ ಮಾಡಲು ಹಣವನ್ನು ಆಯುಕ್ತರು, ಧಾರ್ಮಿಕ ದತ್ತಿಯ ಇಲಾಖೆರವರಿಗೆ ಬಿಡುಗಡೆ ಮಾಡಲಾಗಿದೆ.

ಧಾರ್ಮಿಕ ದತ್ತಿ ಆಯುಕ್ತರವರು ಅನುದಾನದ ಬಿಲ್ಲಿನಲ್ಲಿ ಸಹಿ ಮಾಡುವುದರ ಜೊತೆಗೆ ಮೇಲು ಸಹಿ ಮಾಡಿ, ಸದರಿ ಮೊತ್ತವನ್ನು ಖಜಾನೆಯಿಂದ ಪಡೆದು, ಶ್ರೀ ಜಗದ್ಗುರು ಪಂಡಿತಾರಾಧ್ಯ ಸೇವಾ ಸಮಿತಿ C/o ಶ್ರೀಶೈಲಂ ಜಗದ್ಗುರು ಸೂರ್ಯ ಸಿಂಹಾಸನ ಮಹಾಪೀಠ, ಶ್ರೀಶೈಲಂ, ಆತ್ಮಕೂರು ತಾಲ್ಲೂಕು, ಕರ್ನೂಲು ಜಿಲ್ಲೆ, ಆಂಧ್ರಪ್ರದೇಶ ಸಂಸ್ಥೆಗೆ ವಿತರಿಸಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿ ಆದೇಶಿಸದೆ.

ಕಾಮಗಾರಿ ಕೈಗೊಳ್ಳಲು ಅಂದಾಜುಪಟ್ಟಿ ತಯಾರಿಸಿ, ಅಂದಾಜುಪಟ್ಟಿಗೆ ಸಕ್ಷಮ ಪ್ರಾಧಿಕಾರದಿಂದ ತಾಂತ್ರಿಕ ಮಂಜೂರಾತಿ ಹಾಗೂ ಆಡಳಿತಾತ್ಮಕ ಮಂಜೂರಾತಿ ಪಡೆದು, ಕಾಮಗಾರಿ ಕೈಗೋಳಗ್ಳುವುದು.

ಕಾಮಗಾರಿಯನ್ನು ಪಾರದರ್ಶಕ ಕಾಯ್ದೆ ನಿಯಮಗಳಡಿ ಟೆಂಡರ್ ಕರೆದು, ಕಾಮಗಾರಿ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.409/10

**ಎಲ್. ಎಸ್. ಶ್ರೀಕಂಠಬಾಬು**
ಪೀಠಾಧಿಕಾರಿ
ಕಂದಾಯ ಇಲಾಖೆ ಮುಜರಾಯಿ

**ಕಂದಾಯ ಸಚಿವಾಲಯ**

**ವಿಷಯ :** 2005ನೇ ತಂಡದ ಪರಿವೀಕ್ಷಣಾ ತಹಶೀಲ್ದಾರರುಗಳು ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂ: ಕಂಇ 110 ಎಎಸ್ ಡಿ 2006, ದಿನಾಂಕ: 22-06-2006.
2. ಸರ್ಕಾರದ ಅಧಿಕೃತ ಜ್ಞಾಪನ ಸಂ: ಆರ್ ಡಿ 135 ಎಎಸ್ ಡಿ 2006, ದಿನಾಂಕ: 25-08-2006.
3. ಸರ್ಕಾರದ ಪತ್ರ ಸಂ: ಕಂಇ 292 ಎಎಸ್ ಡಿ 2008, ದಿನಾಂಕ: 24-07-2008.
4. ಸರ್ಕಾರದ ಆದೇಶ ಸಂ: ಆರ್ ಡಿ 292 ಎಎಸ್ ಡಿ 2008, ದಿನಾಂಕ: 19-11-2008, 19-01-2009 ಮತ್ತು ದಿನಾಂಕ: 04-04-2009.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರ. ಸಂ. (1) ದಿನಾಂಕ: 22-06-20006ರ ಸರ್ಕಾರಿ ಅಧಿಸೂಚನೆಯಲ್ಲಿ ಕರ್ನಾಟಕ ಗೆಜೆಟೆಡ್ ಪ್ರೊಬೇಷನರುಗಳ ನೇಮಕಾತಿ (ಸ್ಪರ್ದಾತ್ಕ ಪರೀಕ್ಷೆಗಳ ಮೂಲಕ ನೇಮಕ) ನಿಯಮಗಳು 1997ರ ಅಡಿಯಲ್ಲಿ ಕರ್ನಾಟಕ ಲೋಕಸೇವಾ ಆಯೋಗದಿಂದ ಆಯ್ಕೆಗೊಂಡ ಒಟ್ಟು 40 ಅಭ್ಯರ್ಥಿಗಳನ್ನು ಪರಿವೀಕ್ಷಣಾ ತಹಶೀಲ್ದಾರ್ ಗುಂಪು-ಬಿ ಹುದ್ದೆಗೆ ನೇಮಕಾತಿ ಆದೇಶ ನೀಡಲಾಗಿತ್ತು. ಸದರಿ ಅಧಿಸೂಚನೆಯಲ್ಲಿ ಒಟ್ಟು 40 ಪರಿವೀಕ್ಷಣಾ ತಹಶೀಲ್ದಾರರುಗಳನ್ನು 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯ ಮೇಲೆ ಇರುತ್ತಾರೆಂದು ಮತ್ತು ಈ ಅವಧಿಯಲ್ಲಿ ಕನ್ನಡ ಭಾಷಾ ಪರೀಕ್ಷೆ ಮತ್ತು ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕೆಂದು ತಿಳಿಸಲಾಗಿತ್ತು. ನೇಮಕಗೊಂಡ ಎಲ್ಲಾ 40 ಪರಿವೀಕ್ಷಣಾ ತಹಶೀಲ್ದಾರರುಗಳು ಕರ್ತವ್ಯಕ್ಕೆ ಹಾಜರಾಗಿರುತ್ತಾರೆ.

ಮೇಲೆ ಓದಲಾದ ಕ್ರ. ಸಂ. (2) ದಿನಾಂಕ: 25-08-2006ರಲ್ಲಿ ಎಲ್ಲಾ ಪರಿವೀಕ್ಷಣಾ ತಹಶೀಲ್ದಾರರುಗಳಿಗೆ ಎರಡು ವರ್ಷಗಳ ತರಬೇತಿಗಾಗಿ ವಿವಿಧ ಜಿಲ್ಲೆಗಳಿಗೆ ತೈನಾತಿಸಲಾಗಿತ್ತು. ಅದರಂತೆ, ಇವರುಗಳಲ್ಲಿ ವಿವಿಧ ಕಾರಣಗಳಿಂದ / ಬೇರೆ ಹುದ್ದೆಗೆ ನೇಮಕಗೊಂಡಿದ್ದರಿಂದ ಒಟ್ಟು 6 ಪರಿವೀಕ್ಷಣಾ ತಹಶೀಲ್ದಾರರುಗಳು (ಶ್ರೀ ಹೆಚ್. ಡಿ. ಲೋಕೇಶ್, ಕು: ರೂಪಾ.ಐ.ಪಿ, ಶ್ರೀ ಶಶಿಕುಮಾರ್. ಎನ್., ಶ್ರೀ ಹರ್ಷ ಎಸ್. ಶೆಟ್ಟಿ, ಶ್ರೀ ನವೀನ್ ಕುಮಾರ್ ರಾಜು. ಎಸ್, ಶ್ರೀ ನಿರಂಜನ್, ಸಿಸಿ) ಸೇವೆಯಿಂದ ಬಿಟ್ಟುಹೋಗಿರುತ್ತಾರೆ. ಇನ್ನುಳಿದ 34 ಪರಿವೀಕ್ಷಣಾ ತಹಶೀಲ್ದಾರರುಗಳ ನಿಗದಿತ ಇಲಾಖಾ ಪರೀಕ್ಷೆಗಳನ್ನು ಉತ್ತೀರ್ಣರಾಗಿರುವ ಬಗ್ಗೆ ಜಿಲ್ಲಾ ತರಬೇತಿಯಲ್ಲಿದ್ದಾಗ, ತರಬೇತಿಯನ್ನು ತೃಪ್ತಿಕರವಾಗಿ ಪೂರೈಸಿರುವ ಬಗ್ಗೆ ಹಾಗೂ ಇವರುಗಳ ವಿರುದ್ಧ ಇಲಾಖಾ ವಿಚಾರಣಗಳ ಬಗ್ಗೆ ಮಾಹಿತಿಯನ್ನು ಮೇಲೆ ಓದಲಾದ ಕ್ರ. ಸಂ. (3) ರ. ದಿನಾಂಕ: 24-07-2008 ರಲ್ಲಿ ಎಲ್ಲಾ ಜಿಲ್ಲಾಧಿಕಾರಿಗಳಿಂದ ಪಡೆಯಲು ಪತ್ರ ಬರೆಯಲಾಗಿತ್ತು. ಅದರಂತೆ, ಜಿಲ್ಲಾಧಿಗಾರಿಗಳು ತಮ್ಮ ವ್ಯಾಪ್ತಿಯಲ್ಲಿ ಇದ್ದ ಪರಿವೀಕ್ಷಣಾ ತಹಶೀಲ್ದಾರರುಗಳ ಬಗ್ಗೆ ನಿಗದಿತ ಇಲಾಖಾ ಪರೀಕ್ಷೆಗಳಲ್ಲಿ (ಕನ್ನಡ ಭಾಷಾ ವಿನಾಯಿತಿ ಸೇರಿ) ಉತ್ತೀರ್ಣರಾಗಿರುವುದಾಗಿ ಹಾಗೂ ಪರಿವೀಕ್ಷಣಾ ತಹಶೀಲ್ದಾರರುಗಳು ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಕಾರ್ಯ ನಿರ್ವಹಿಸಿರುತ್ತಾರೆ ಎಂದು ಶಿಫಾರಸ್ಸು ಮಾಡಿರುವುದರಿಂದ ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5 (1) ರನ್ವಯ ಮೇಲೆ ಓದಲಾದ ಕ್ರ. ಸಂ. (4), ರ ದಿನಾಂಕ: 19-11-2008 ಮತು 19-01-2009 ಹಾಗೂ 04-04-2009 ರಲ್ಲಿ ಕ್ರಮವಾಗಿ 15 ಮತ್ತು 13 ಹಾಗೂ 04 ಪರಿವೀಕ್ಷಣಾ ತಹಶೀಲ್ದಾರರುಗಳ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಲಾಗಿರುತ್ತದೆ. ಮುಂದುವರೆದು, ಜಿಲ್ಲಾಧಿಕಾರಿಗಳಿಂದ ಬಂದ ವರದಿಯ ಆಧಾರದ ಮೇಲೆ ಹಾಗೂ ಸಂಬಂಧಪಟ್ಟ ಇಲಾಖಾ ಪರೀಕ್ಷೆಗಳನ್ನು (ಕನ್ನಡ ಭಾಷಾ ವಿನಾಯಿತಿ ಸೇರಿ) ಉತೀರ್ಣರಾಗಿರುವ ಬಗ್ಗೆ ಹಾಗೂ ಇವರುಗಳ ಬಗ್ಗೆ ಯಾವುದೇ ಇಲಾಖಾ ವಿಚಾರಣೆ ಬಾಕಿಯಿಲ್ಲವೆಂದು ಜಿಲ್ಲಾಧಿಕಾರಿಗಳು ವರದಿ ಮಾಡಿರುವ ಹಿನ್ನಲೆಯಲ್ಲಿ, ಶ್ರೀ ಎಂ. ಎನ್. ಮಂಜುನಾಥ್, ಪರಿವೀಕ್ಷಣಾ ತಹಶೀಲ್ದಾರರು ಇವರು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5(1)ರನ್ವಯ ತೃಪ್ತಿಕರವಾಗಿ ಪರಿವೀಕ್ಷಣಾ ಅವಧಿಯನ್ನು ಪೂರೈಸಿರುತ್ತಾರೆಂದು ಘೋಷಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಆರ್‌ಡಿ 292 ಎಎಸ್ ಡಿ 2008, ಬೆಂಗಳೂರು, ದಿನಾಂಕ: 1ನೇ ಫೆಬ್ರವರಿ 2010.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಶ್ರೀ ಎಂ. ಎನ್. ಮಂಜುನಾಥ್, ಪರಿವೀಕ್ಷಣಾ ತಹಶೀಲ್ದಾರ ಪ್ರಸ್ತುತ ತಹಶೀಲ್ದಾರ್, ಪಾವಗಡ ತಾಲ್ಲೂಕು, ತುಮಕೂರು ಜಿಲ್ಲೆ ಇವರು ಕರ್ನಾಟಕ ಸಿವಿಲ್ ಸೇವಾ (ಪರಿವೀಕ್ಷಣಾ) ನಿಯಮಗಳು 1977ರ ನಿಯಮ 5 (1) ರಡಿ ಪರಿವೀಕ್ಷಣಾ ಅವಧಿಯನ್ನು ತೃಪ್ತಿಕರವಾಗಿ ಪೂರೈಸಿರುತ್ತಾರೆಂದು ಘೋಷಿಸಿ ಆದೇಶಿಸಿದೆ.

| ಕ್ರ. ಸಂ. | ಪರಿವೀಕ್ಷಣಾ ತಹಶೀಲ್ದಾರರ ಹೆಸರು – (ಶ್ರೀ / ಶ್ರೀಮತಿ) | ಪರಿವೀಕ್ಷಣಾ ಅವಧಿ ಪ್ರಾರಂಭವಾದ ದಿನಾಂಕ | ಪರಿವೀಕ್ಷಣಾ ಅವಧಿ ಮುಕ್ತಾಯವಾದ ದಿನಾಂಕ |
|---|---|---|---|
| 1 | ಎಂ. ಎನ್. ಮಂಜುನಾಥ್ | 03–07–2006 | 02–07–2008 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.410/10

**ಎಸ್. ಬಿ. ಸಸಾಲಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ ಸೇವೆಗಳು–3

## ಕಂದಾಯ ಸಚಿವಾಲಯ

**ವಿಷಯ :** ಶ್ರೀ ಸೈಯದ್ ಇಲಿಯಾಸ್ ಅಹಮದ್, ಭೂ.ಜಂ.ನಿ (ವಿಚಾರಣೆ ಮತ್ತು ತನಿಖೆ) ಕೇಂದ್ರ ಸರ್ವೆ ಕಛೇರಿ, ಬೆಂಗಳೂರು ರವರನ್ನು ಇಲಾಖಾ ವಿಚಾರಣೆಯಲ್ಲಿ ನೇಮಕ ಮಾಡಿರುವುದನ್ನು ಬದಲಾಯಿಸಿ, ಶ್ರೀ ಎಂ.ಜಿ. ಹಿರೇಮಠ, ನ್ಯಾಯಾಧೀಶರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಭೂದಾಸೇ (1) 2007, ದಿನಾಂಕ: 08–09–2008

2. ಶ್ರೀ ಕೃಷ್ಣಮೂರ್ತಿ ಗೋಪಾಲ್, ಭೂದಾಖಲೆಗಳ ಜಂಟಿ ನಿರ್ದೇಶಕರು, ಭೂಮಾಪನ ತರಬೇತಿ ಸಂಸ್ಥೆ, ಮೈಸೂರು ಇವರ ಮನವಿ ದಿನಾಂಕ: 15–01–2010

**ಪ್ರಸ್ತಾವನೆ :**

ಮೇಲೆ ಓದಲಾದ (1)ರ ಆದೇಶದಲ್ಲಿ ಶ್ರೀ ಕೃಷ್ಣಮೂರ್ತಿ ಗೋಪಾಲ್, ಇವರ ಶಿಸ್ತು ಪ್ರಕರಣದಲ್ಲಿ ಸರ್ಕಾರದ ಆದೇಶ ಸಂಖ್ಯೆ: ಕಂಇ 53 ಭೂದಾಸೇ (1) 2007, ದಿನಾಂಕ: 08–09–2008, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪದತ್ತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಸೈಯದ್ ಇಲಿಯಾಸ್ ಅಹಮದ್, ಭೂದಾಖಲೆಗಳ ಜಂಟಿ ನಿರ್ದೇಶಕರು (ವಿಚಾರಣೆ ಮತ್ತು ತನಿಖೆ) ಕೇಂದ್ರ ಕಛೇರಿ ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಭೂದಾಖಲೆಗಳ ಉಪ ನಿರ್ದೇಶಕರು (ಆಡಳಿತ), ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಗಳನ್ನಾಗಿ ನೇಮಕ ಮಾಡಿ ಆದೇಶಿಸಿದೆ. ಮೇಲಿ (2)ರಲ್ಲಿ ಓದಲಾದ ದಿನಾಂಕ: 15–01–2010ರ ಮನವಿ ಪತ್ರದಲ್ಲಿ ಶ್ರೀ ಕೃಷ್ಣಮೂರ್ತಿ ಗೋಪಾಲ್, ಭೂದಾಖಲೆಗಳ ಜಂಟಿ ನಿರ್ದೇಶಕರು, ಭೂಮಾಪನ ತರಬೇತಿ ಸಂಸ್ಥೆ, ಮೈಸೂರು ಇವರು ಶ್ರೀ ಸೈಯದ್ ಇಲಿಯಾಸ್ ಅಹಮದ್ ಇವರು ತಮಗಿಂತ ಜೇಷ್ಠತೆಯಲ್ಲಿ ಕಿರಿಯರಾಗಿದ್ದು ನ್ಯಾಯಪಾಲನಾ ದೃಷ್ಟಿಯಿಂದ ಸದರಿಯವರನ್ನು ತಕ್ಷಣ ಬದಲಾಯಿಸಿ ಇವರ ಸ್ಥಾನದಲ್ಲಿ ಬೇರೆ ಯವುದೇ ನಿವೃತ್ತ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯನ್ನು ನೇಮಿಸಲು ಕೋರಿರುತ್ತಾರೆ. ಆದ್ದರಿಂದ ವಿಚಾರಣಾಧಿಕಾರಿ ಬದಲಾವಣೆ ಕೋರಿಕೆಯನ್ನು ಸರ್ಕಾರವು ಪರಿಗಣಿಸಿ, ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಟಿ. ರವೀಂದ್ರಪ್ಪ, ಭೂದಾಖಲೆಗಳ ಉಪ ನಿರ್ದೇಶಕರು (ಆಡಳಿತ), ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲು ತೀರ್ಮಾನಿಸಿರುವ ಹಿನ್ನಲೆಯಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 53 ಭೂದಾಸೇ(1) 2007, ಬೆಂಗಳೂರು, ದಿನಾಂಕ: 4ನೇ ಫೆಬ್ರವರಿ 2010**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಶ್ರೀ ಎಂ.ಜಿ. ಹಿರೇಮಠ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಶ್ರೀ ಟಿ. ರವೀಂದ್ರಪ್ಪ, ಭೂದಾಖಲೆಗಳ ಉಪ ನಿರ್ದೇಶಕರು (ಆಡಳಿತ), ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 411

**(ಬಿ.ವಿ. ಚೌಕೀಮಠ)**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಭೂಮಾಪನ)